# ನಮ್ಮ ಮಾನಸ

ಸಂಪುಟ : 2 ಫೆಬ್ರವರಿ 2009 ಸಂಚಿಕೆ : 10



ಪ್ರದರ್ಶನಕ್ಕೆಂದೇ ಹೊರಬಂದಿರುವ
ಅಡುಗೆಯ ಆಟಿಕೆ ನಾನು
ದಿನನಿತ್ಯ ನನ್ನ ತಲೆ ಮೇಲೆ
ಹತ್ತಕ್ಕೂ ಹೆಚ್ಚು ಆಜ್ಞೆಗಳು
ಇದನಿನ್ನೂ ಆ ಗಾಸ್ಪೆಲ್ಲರ್ ಗುರುತಿಸಬೇಕಿದೆ

# ನಮ್ಮ ಮಾನಸ

**ಫೆಬ್ರವರಿ 2009**

ಸಂಪುಟ : 2    ಸಂಚಿಕೆ : 10

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*

## ಪರಿವಿಡಿ



*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್.**
**ಸವಿತಾ ಎ., ವೆಂ. ವನಜಾ**
**ಗೀತಾ, ಎಚ್.ಎಸ್. ಪುಷ್ಪಾ.**

•

*ಸಲಹೆ – ಸಹಕಾರ*
**ಇಳಾ ವಿಜಯಾ**
**ಸುಮಿತ್ರಾಬಾಯಿ ಬಿ.ಎನ್.**

•

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎಸ್.,**
**ಶ್ಯಾಮಲ, ತಾಜುಮಾ**

•

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಓದುಗರ ಗಮನಕ್ಕೆ

*ಓದುಗರೆಲ್ಲರ ಸಹಕಾರ ಹಾಗೂ ಪ್ರೋತ್ಸಾಹದಿಂದ 'ನಮ್ಮ ಮಾನಸ'ದ ಪ್ರಕಟಣೆ ಸಾಧ್ಯವಾಗಿದೆ. ಪತ್ರಿಕೆಗೆ ಓದುಗರ ಚಂದಾ ಹಣವೇ ಜೀವಾಳ. ಚಂದಾಹಣ ಕಳುಹಿಸಿ ಮತ್ತು ಚಂದಾ ನವೀಕರಿಸಬೇಕಾದವರು ನವೀಕರಿಸಿ ಪತ್ರಿಕೆಯನ್ನು ಆರ್ಥಿಕವಾಗಿ ಸದೃಢಗೊಳಿಸಬೇಕೆಂದು ವಿನಮ್ರವಾಗಿ ಕೋರುತ್ತೇವೆ.*

**ವಾರ್ಷಿಕ ಚಂದಾ – ರೂ. *100/–***

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

**ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ**

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

## 'ಸಂಸ್ಕೃತಿ ರಕ್ಷಕ'ರಿಗೆ ಕಡಿವಾಣ ಯಾವುದು ?

ಮಂಗಳೂರಿನಲ್ಲಿ ವಿದ್ಯಾರ್ಥಿ / ವಿದ್ಯಾರ್ಥಿನಿಯರ ಮೇಲೆ, ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯದ ಪರಮಾವಧಿ ಎಂಬಂತೆ ಅಲ್ಲಿಯ ಪಬ್‌ವೊಂದರಲ್ಲಿ ಮಹಿಳೆಯರ ಮೇಲೆ ನಡೆದ ಅಮಾನವೀಯ ಹಿಂಸೆಗೆ ಈಗಾಗಲೇ ಪ್ರತಿಭಟನೆಯ ಧ್ವನಿಗಳು ಎಲ್ಲೆಡೆ ಕೇಳಿಬರುತ್ತಿವೆ. ಮಾಧ್ಯಮಗಳು ಚಿತ್ರಿಸಿದ ದೃಶ್ಯಗಳು ಎಂತಹ ನಾಗರಿಕರನ್ನೂ ಬೆಚ್ಚಿಸುವಂತಹವುಗಳಾಗಿದ್ದವು. ಯುವತಿಯರನ್ನು ಅಟ್ಟಿಸಿಕೊಂಡು ಹೋಗುವ, ಅವರನ್ನು ಹೊಡೆಯುವ, ದೈಹಿಕವಾಗಿ ಅವರನ್ನು ಹಿಂಸಿಸುವ–ಒಂದು ಗುಂಪಿನ ಕ್ರಿಯೆಗಳನ್ನು ಇಡಿಯ ಪ್ರಪಂಚ ವೀಕ್ಷಿಸಿದೆ. ಎಷ್ಟೊಂದು ಅನಾಗರಿಕರಾಗಿ ನಾವು ಬದುಕುತ್ತಿದ್ದೇವೆ ಎಂಬುದಕ್ಕೆ ಸಾಕ್ಷಿಯಂತಿರುವ ಈ ದೃಶ್ಯಗಳಿಂದಾಗಿ ನಾವು ಪ್ರಪಂಚದೆದುರು ನಾಚಿಕೆಯಿಂದ ತಲೆತಗ್ಗಿಸಬೇಕಾಗಿದೆ. ಮನಃಸಾಕ್ಷಿ ಇರುವ ಪ್ರತಿಯೊಬ್ಬ ನಾಗರಿಕನೂ ಇಂದು ಎದೆ ಮುಟ್ಟಿಕೊಂಡು ನೋಡಿಕೊಳ್ಳಬೇಕಾದಂತಹ ಪರಿಸ್ಥಿತಿಯನ್ನು ಮಂಗಳೂರಿನಲ್ಲಿ ಹುಟ್ಟುಹಾಕಲಾಗಿದೆ.

ಯಾವ ಸಂಸ್ಕೃತಿಯನ್ನು ಎತ್ತಿ ಹಿಡಿಯಲಿಕ್ಕಾಗಿ 'ಶ್ರೀರಾಮಸೇನೆ' ಈ ರೀತಿಯ ನೈತಿಕ ಬೇಹುಗಾರಿಕೆ, ನೈತಿಕ ಪಹರೆ, ನೈತಿಕ ಪೊಲೀಸಿಂಗ್ ಮಾಡುತ್ತಿದೆಯೋ–ಅಂತಹ ಹಿಂದೂ ಸಂಸ್ಕೃತಿಗೆ ಮಸಿ ಬಳಿಯುವ ಕೆಲಸವನ್ನು, ಅದನ್ನು ಅಧಃಪತನಕ್ಕಿಳಿಸುವ ಕೆಲಸವನ್ನು ಅವರೇ ಮಾಡುತ್ತಿದ್ದಾರೆ. ಧರ್ಮವನ್ನು ರಾಜಕೀಯ, ಸಾಂಸ್ಕೃತಿಕ ಕಾರಣಗಳಿಗಾಗಿ ಬಳಸಿಕೊಳ್ಳುತ್ತಿರುವ 'ಹಿಂದುತ್ವ' ವಾದಿಗಳು ಹುಟ್ಟುಹಾಕುತ್ತಿರುವ ಸಾಂಸ್ಕೃತಿಕ ಭಯೋತ್ಪಾದನೆ – ಮೂಲದಲ್ಲಿ ಧರ್ಮ ಏನನ್ನು ಹೇಳುತ್ತದೆ ಎನ್ನುವಂತಹ ತಹತಹವನ್ನು, ಒಂದು ಬೌದ್ಧಿಕ ಚರ್ಚೆಯನ್ನು, ತಾತ್ವಿಕ ಚಿಂತನೆಗಳ ಬಗ್ಗೆ ಒಂದು ಒಳನೋಟವನ್ನು ಕೊಡುವ ಬದಲು ಹೆದರಿ ಓಡುವ ಹಾಗೆ ಮಾಡುವುದರಲ್ಲಿ ಜಯಪ್ರದವಾಗುತ್ತಿದೆ. ಹಾಗೆ ಹೆದರಿಸುವುದೇ ಶ್ರೀರಾಮಸೇನೆಯ ಹಾಗೂ ತಾವು 'ಹಿಂದುತ್ವ'ವಾದಿಗಳೆಂದು ಕರೆದುಕೊಳ್ಳುವ ಇತರ ಗುಂಪುಗಳ 'ಅಜೆಂಡಾ'ಗಳಾಗಿರುವುದು ಮಂಗಳೂರಿನಲ್ಲಿ ನಡೆಯುತ್ತಿರುವ ಘಟನೆಗಳಿಂದ ಋಜುವಾತಾಗುತ್ತಿದೆ.

ಹಿಂದೂಧರ್ಮದ ರಕ್ಷಕರು, ಗುತ್ತಿಗೆದಾರರು ಎಂದು ಸ್ವಯಂ ಘೋಷಿಸಿಕೊಂಡಿರುವ ಈ ಗುಂಪುಗಳು ಅಸಹನೆಯ ಸಂಸ್ಕೃತಿಯನ್ನು ಹುಟ್ಟು ಹಾಕಿ ಕಾನೂನನ್ನು ತಮ್ಮ ಕೈಗೆ ಎತ್ತಿಕೊಂಡಿವೆ. ದೇಶದ ನೈತಿಕತೆಯ ಪ್ರಶ್ನೆ, ಸಂಸ್ಕೃತಿಯ ಪ್ರಶ್ನೆಯ ಹಿನ್ನೆಲೆಯಲ್ಲಿ ಮಹಿಳೆಯರ ಆಧುನಿಕತೆಯನ್ನು ವಿರೋಧಿಸಿ, ಸಾಂಪ್ರದಾಯಿಕ ಮೌಲ್ಯಗಳನ್ನು ಅವರಲ್ಲಿ ರೂಢಿಸಲು ಪ್ರಯತ್ನಿಸಲಾಗುತ್ತಿದೆ. ಸಾಂಸ್ಕೃತಿಕ ಹರಿಕಾರರಾಗಲು ಮಹಿಳೆಯರನ್ನು ಒತ್ತಾಯಿಸುವ ಹಿಂದುತ್ವವಾದಿ ಗುಂಪುಗಳು ಮಾತೃದೇವೋಭವ ಎಂದು ಹೇಳುತ್ತಲೇ, ಕಾಲಕ್ರಮೇಣ ಮನೆಯ ನಾಲ್ಕುಗೋಡೆಯ ಒಳಗೆ ಮಹಿಳೆಯರನ್ನು ಮತ್ತೆ ಬಂಧಿಸಿಡುವಂತಹ ಹುನ್ನಾರವನ್ನು ನಡೆಸುತ್ತಿವೆ. ನೈತಿಕತೆಯ ಭಯೋತ್ಪಾದನೆಯನ್ನು ಹುಟ್ಟುಹಾಕುತ್ತಾ-ಭೀಕರ ಅಪರಾಧಗಳನ್ನು ಎಸಗುತ್ತಿರುವ ಶ್ರೀರಾಮಸೇನೆಯಂತಹ ಹಿಂದುತ್ವವಾದಿ ಗುಂಪುಗಳು ಹೆದರಿಕೆಯ ವಾತಾವರಣ ಹುಟ್ಟುಹಾಕುತ್ತಾ–ಇತರ ಕೋಮಿನವರೊಂದಿಗೆ ಸ್ನೇಹಿತರಾಗಬಾರದು, ಇಂತಹುದೇ ಉಡುಪು ಧರಿಸಬೇಕು, ಬೇರೆ ಸಮುದಾಯದೊಂದಿಗೆ ಓಡಾಡಬಾರದು, ಟೂರ್ ಹೋಗಬಾರದು, ಒಟ್ಟಿಗೆ ಕಾಣಿಸಿಕೊಳ್ಳಲೇಬಾರದು ಎಂಬಂತಹ 'ನೈತಿಕ' ಪಟ್ಟಿಗಳೊಂದಿಗೆ ಮಂಗಳೂರಿನಲ್ಲಿ ಸದ್ದು–ಗದ್ದಲ ಮಾಡುತ್ತಿದ್ದಾರೆ. ಹೆಣ್ಣುಮಕ್ಕಳನ್ನು ಬೀದಿಗಳಲ್ಲಿ ಹೊಡೆದಟ್ಟುವುದೇ ಹಿಂದೂ ಸಂಸ್ಕೃತಿಯೆ? ಯಾವುದೇ ವಿಷಯದ ಬಗ್ಗೆ ಅಭಿಪ್ರಾಯ ಭೇದ, ವಿರೋಧ ಇದ್ದಲ್ಲಿ ಪ್ರತಿಭಟಿಸಲು ಹಲವು ಮಾರ್ಗಗಳಿದ್ದವು. ಬಡಿದು, ಕೊಚ್ಚಿ ಹಾಕುವುದೇ ಪರಿಹಾರವಲ್ಲ.

ಅಂಥ ಯಾವ ಅಧಿಕಾರ-ಹಕ್ಕನ್ನೂ ಈ ಸ್ವಘೋಷಿತ 'ಸಂಸ್ಕೃತಿ ರಕ್ಷಕ'ರಿಗೆ ಕೊಟ್ಟಿಲ್ಲ. ಈ ಅತಿರೇಕಗಳಿಗೆ ಮೊದಲು ಕಡಿವಾಣ ಬೀಳಲಿ. 'ಹಿಂದುತ್ವ' ವಿಚಾರಧಾರೆಯನ್ನೇ ಪ್ರಬಲ ಅಜೆಂಡಾ ಆಗಿ ಹೊಂದಿರುವ ತಮ್ಮ ಸರ್ಕಾರ ಏನೂ ಮಾಡಲಾಗದು, ಏನೂ ಮಾಡಲಾರರು ಎನ್ನುವ ಅವರ ಮನೋಸ್ಥೈರ್ಯ ಅವರನ್ನು ಇಂತಹ ಅಪರಾಧೀಕರಣಕ್ಕೆ ದೂಡುತ್ತಿದೆ.

ಆಳುವ ಪಕ್ಷ ಯಾವುದೇ ಆಗಿರಲಿ, ಅದು ಜನಾದೇಶದ ಮೇಲೆ ಆರಿಸಿ ಬಂದಿರುತ್ತದೆ. ಅದು ಸರ್ವಾಧಿಕಾರ ಎಂದು ಭಾವಿಸಬಾರದು. ಎಲ್ಲ ಪ್ರಜೆಗಳೂ ಅದರ ಮೂಗಿನ ನೇರಕ್ಕೆ ವ್ಯವಹರಿಸಬೇಕೆಂದು ಆದೇಶಿಸುವ ಹಕ್ಕೂ ಅದಕ್ಕಿಲ್ಲ. ಪ್ರಜಾಪ್ರಭುತ್ವದ ನಿಜವಾದ ಅರ್ಥವನ್ನು ಗ್ರಹಿಸಿಕೊಂಡು ಆಡಳಿತ ನಡೆಸದಿದ್ದರೆ, ಬಹುದೊಡ್ಡ ಬೆಲೆ ತೆರಬೇಕಾಗುತ್ತದೆ.

ಸರ್ಕಾರ ಅಪರಾಧಿಗಳನ್ನು ಶಿಕ್ಷಿಸುತ್ತೇವೆ ಎಂದು ಹೇಳಿಕೆ ಕೊಡುತ್ತಿದೆ, ಪಬ್ ಸಂಸ್ಕೃತಿಯ ಬಗ್ಗೆ ಅಪಸ್ವರ ಕೂಡಾ ಎತ್ತುತ್ತಿದೆ. ಅಷ್ಟೊಂದು ನೈತಿಕ ಎಚ್ಚರಗಳಿದ್ದರೆ ಸರಕಾರ ಕುಡಿತವನ್ನು ರಾಜ್ಯದಲ್ಲಿ ಸಂಪೂರ್ಣವಾಗಿ ನಿಷೇಧಿಸಲಿ. ಅಶ್ಲೀಲತೆಯೆಂದು ಅವರು ಕರೆಯುವುದನ್ನು ಸಿನಿಮಾ ಕ್ಷೇತ್ರದಿಂದ ಹಿಡಿದು ಎಲ್ಲಾ ಕ್ಷೇತ್ರದಲ್ಲೂ ನಿಷೇಧಿಸಲಿ. ಸರ್ಕಾರದ ಇಬ್ಬಂದಿತನ ಜನರಿಗೆ ಅರ್ಥವಾಗುತ್ತದೆ. ಮಂಗಳೂರಿನಲ್ಲಿ ನಡೆಯುತ್ತಿರುವ ಅಪರಾಧಗಳನ್ನು ಗಣನೆಗೆ ತೆಗೆದುಕೊಂಡು ಅಪರಾಧಿಗಳನ್ನು ಸರ್ಕಾರ ಕಾನೂನುಬದ್ಧವಾಗಿ ಶಿಕ್ಷಿಸಲಿ. ಯುವಕರು / ಯುವತಿಯರು, ವಿದ್ಯಾರ್ಥಿ/ ವಿದ್ಯಾರ್ಥಿನಿಯರ ಮೇಲೆ ಹೀಗೆಯೇ ಸ್ವಯಂ ಘೋಷಿತ ಗುಂಪುಗಳು ಸಾಂಸ್ಕೃತಿಕ ಭಯೋತ್ಪಾದನೆ ಮುಂದುವರೆಸಿದರೆ ಸರ್ಕಾರದ ವಿರುದ್ಧ ಜನರೇ ತಿರುಗಿ ಬೀಳುವ ಕಾಲ ದೂರವಿಲ್ಲ. ಹಿಂಸೆಗೆ ಒಳಗಾಗಿರುವ ವ್ಯಕ್ತಿಗಳು ಭಯದ ವಾತಾವರಣದಲ್ಲಿ ಮರೆಗೆ ಸರಿದಿದ್ದರೂ ಕ್ರಮೇಣ ಅವರು ಹೊರಗೆ ಬಂದು ಧೈರ್ಯವಾಗಿ ಮಾತನಾಡುವಂತಹ ಒಂದು ಮುಕ್ತ ವಾತಾವರಣವನ್ನು ಸೃಷ್ಟಿಸುವುದು, ಬೆಂಬಲಿಸುವುದು, ನೈತಿಕ ಬಲ ತುಂಬುವುದು ನಮ್ಮ-ನಿಮ್ಮೆಲ್ಲರ ಕರ್ತವ್ಯವಾಗಿದೆ. ಪ್ರಜಾಪ್ರಭುತ್ವದಲ್ಲಿ ವ್ಯಕ್ತಿಗಳು ಅವರ ಇಷ್ಟಕ್ಕೆ ಅನುಗುಣವಾಗಿ ಇತರರಿಗೆ ತೊಂದರೆಯಾಗದಂತೆ ಬದುಕುವ ಹಕ್ಕುಗಳನ್ನು ರಕ್ಷಿಸಬೇಕಾಗಿದೆ. ಇದಕ್ಕಾಗಿ ಸಂಘಟಿತ ಹೋರಾಟಗಳು ವ್ಯವಸ್ಥಿತವಾಗಿ ನಡೆಯಬೇಕಾಗಿದೆ.

* * *

ನ್ಯಾಷನಲ್ ಕಮಿಷನ್ ಫಾರ್ ವಿಮೆನ್‌ನ ಶ್ರೀಮತಿ ನಿರ್ಮಲ ವೆಂಕಟೇಶ್‌ರವರು ಮಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಪಬ್‌ನಲ್ಲಿ ದಾಳಿಗೊಳಗಾದ ಯುವತಿಯರ ಬಗೆಗಿಂತ ಹೆಚ್ಚಾಗಿ ಪಬ್‌ನಲ್ಲಿನ ಸೆಕ್ಯೂರಿಟಿ, ಪಬ್ ಸಂಸ್ಕೃತಿಯ ಬಗ್ಗೆ ಮಾತನಾಡಿದ್ದಾರೆ. ಪೊಲೀಸರ ಬಗ್ಗೆ, ಪೊಲೀಸ್ ಕಾರ್ಯವೈಖರಿಯ ಬಗ್ಗೆ ತಮ್ಮ ಸಂತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ದಾಳಿಯನ್ನು ಪಕ್ಕಕ್ಕೊತ್ತಿ ಈ ರೀತಿ ಮಾತನಾಡಿದ ಇವರು ಮಂಗಳೂರಿನಲ್ಲಿ ಈಗಾಗಲೇ ಮಹಿಳೆಯರ ಮೇಲೆ ನಡೆದಿರುವ ದಾಳಿಯ ಬಗ್ಗೆ ಏನು ಹೇಳುತ್ತಾರೆ? ಈಗಾಗಲೇ ಸಾಕಷ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು ಕೋಮುವಾದಿ ಸಂಘಟನೆಗಳ ದೌರ್ಜನ್ಯದಿಂದ ಹಿಂಸಿಸಲ್ಪಟ್ಟಿದ್ದಾರೆ. ಪಬ್‌ನಲ್ಲಿ ನಡೆದ ದಾಳಿ ಈ ಹಿಂಸೆಯ ಪರಮಾವಧಿ. ಇವೆಲ್ಲವನ್ನು ಬದಿಗೊತ್ತಿ ಪಬ್ ಸಂಸ್ಕೃತಿಯ ಬಗ್ಗೆ ಮಾತ್ರ ನಿರ್ಮಲ ವೆಂಕಟೇಶ್‌ರವರು ಮಾತನಾಡಿದ್ದು ಎಷ್ಟು ಪ್ರಸ್ತುತವಾಗಿತ್ತು? ಇಂತಹ ಹೇಳಿಕೆ ನೀಡುವ ನಿರ್ಮಲ ನ್ಯಾಷನಲ್ ಕಮಿಷನ್ ಫಾರ್ ವಿಮೆನ್‌ನಲ್ಲಿ ಎಷ್ಟು ಸಮರ್ಥವಾಗಿ ಕಾರ್ಯ ನಿರ್ವಹಿಸಬಲ್ಲರು ಎಂಬುದನ್ನು ಊಹಿಸಬಹುದಾಗಿದೆ !

* * *

ಕನ್ನಡ ವಿಶ್ವವಿದ್ಯಾಲಯದ ಪ್ರತಿಷ್ಠಿತ ನಾಡೋಜ ಪ್ರಶಸ್ತಿ ಗೌರವ ಹಿರಿಯ ಲೇಖಕಿ ಕಮಲಾಹಂಪನಾ ಅವರಿಗೆ ಲಭಿಸಿದೆ. ಅವರಿಗೆ ಮಾನಸ ಬಳಗದ ಅಭಿನಂದನೆಗಳು.

❑

1300 ಕಂತುಗಳನ್ನು ಸಮೀಪಿಸುತ್ತಿರುವ

ಬಿ. ಸುರೇಶ ಅವರ

ನಾಕುತಂತಿ

ನಿರ್ಮಾಪಕರು:
ಶೈಲಜಾ ನಾಗ್, ಎಸ್.ವಿ. ಶಿವಕುಮಾರ್

# ಮಾನವ ಹೃದಯಗಳಿಗೆ ಬೇಕೀಗ ಸರಪಳಿಯ ಬೆಸುಗೆ

ಕಳೆದ ತಿಂಗಳು ಮಂಗಳೂರು ನಗರದಲ್ಲಿ ಪಬ್ ಒಂದರ ಮೇಲೆ ನಡೆಸಲಾದ ಹಿಂಸಾಚಾರ ದೌರ್ಜನ್ಯಗಳನ್ನು ಖಂಡಿಸಿ, ಅದರ ವಿರುದ್ಧವಾಗಿ ಬೃಹತ್ ಪ್ರಮಾಣದ ಸಾಮೂಹಿಕ ಪ್ರತಿಭಟನೆಯೊಂದನ್ನು ದಿನಾಂಕ 30.01.2009ರಂದು ಮಂಗಳೂರಿನಲ್ಲಿ ನಡೆಸಲಾಯಿತು. ಹಲವಾರು ಪ್ರಗತಿಪರ ಸಂಘಟನೆಗಳು ಮತ್ತು ಕಾಲೇಜು ವಿದ್ಯಾರ್ಥಿಗಳು ಒಟ್ಟಾಗಿ ಸೇರಿ ಮಂಗಳೂರಿನ ಹಂಪನಕಟ್ಟೆ ವೃತ್ತದ ಬಳಿಯಲ್ಲಿ ಬೃಹತ್ತಾದ ಮಾನವ ಸರಪಳಿಯನ್ನು ರಚಿಸುವ ಮೂಲಕ ಸದಾ ವಾಹನ ಸಂಚಾರ ದಟ್ಟವಾಗಿರುವ ಹಂಪನಕಟ್ಟೆ ಜಂಕ್ಷನ್ ಬಳಿ ಸುಮಾರು 15 ನಿಮಿಷಕಾಲ ವಾಹನ ಸಂಚಾರವನ್ನು ಮೌನವಾಗಿ ತಡೆಗಟ್ಟಿದರು.

ಈ ವಿಶಿಷ್ಟ ರೀತಿಯ ಪ್ರತಿಭಟನೆಯಲ್ಲಿ ಡೆಮಾಕ್ರೆಟಿಕ್ ಯೂತ್ ಫೆಡರೇಷನ್ ಆಫ್ ಇಂಡಿಯಾ, ಕೋಮು ಸೌಹಾರ್ದ ವೇದಿಕೆ, ಸಮುದಾಯ, ಜನವಾದಿ ಮಹಿಳಾ ಸಂಘಟನೆ, ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್ಟಿ, ಕರ್ನಾಟಕ ರಕ್ಷಣಾ ವೇದಿಕೆ, ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್, ದಲಿತ ಸಂಘರ್ಷ ಸಮಿತಿ ಹಾಗೂ ಮಂಗಳೂರು ನಗರದ ಹಲವಾರು ಶೈಕ್ಷಣಿಕ ಸಂಸ್ಥೆಗಳೂ ಪಾಲ್ಗೊಂಡಿದ್ದವು. ವಿವಿಧ ಕಾಲೇಜುಗಳ ವಿದ್ಯಾರ್ಥಿಗಳೂ ದೊಡ್ಡ ಪ್ರಮಾಣದಲ್ಲಿ ಪಾಲ್ಗೊಂಡಿದ್ದ ಈ ಪ್ರತಿಭಟನೆಯನ್ನು 'ಹುತಾತ್ಮರ ದಿನ'ದಂದೇ ಉದ್ದೇಶಪೂರ್ವಕವಾಗಿ ಹಮ್ಮಿಕೊಳ್ಳಲಾಗಿತ್ತು.

ಮಾನವ ಸರಪಳಿ ಮೂಲಕ ಮೌನ ಪ್ರತಿಭಟನೆ ನಡೆಸಿದ ನಂತರ ಈ ಎಲ್ಲ ಸಂಘಟನೆಗಳು ಹಾಗೂ ವಿದ್ಯಾರ್ಥಿಗಳು ಅಲ್ಲಿಂದ ಮೆರವಣಿಗೆಯಲ್ಲಿ ಸಾಗಿ ನಗರದ ಪುರಭವನದ ಮುಂದೆ ಬಹಿರಂಗ ಸಭೆ ಸೇರಿದರು. ಬೆಂಗಳೂರಿನಿಂದ ಈ ಪ್ರತಿಭಟನೆಯಲ್ಲಿ ಭಾಗವಹಿಸಲೆಂದೇ ಬಂದಿದ್ದ ಹಿರಿಯ ಚಿಂತಕ, ನಟ ಪ್ರೊ॥ ಜಿ.ಕೆ. ಗೋವಿಂದರಾವ್ ಸಭೆಯನ್ನು ಕುರಿತು ಮಾತನಾಡಿದರು. ಕರಾವಳಿ ಭಾಗದ ಜನರ ಬುದ್ಧಿವಂತಿಕೆ, ಪ್ರತಿಭೆಗಳ ಬಗ್ಗೆ ಕರ್ನಾಟಕದ ಇತರ ಪ್ರದೇಶದ ಜನರು ಯಾವಾಗಲೂ ಅಸೂಯೆಪಡುತ್ತಲೇ ಬಂದಿದ್ದಾರೆ, ಆದರೆ ಕಳೆದ ಕೆಲವು ವರ್ಷಗಳಿಂದ ಈ ಕರಾವಳಿ ಜನರ ಬುದ್ಧಿಮತ್ತೆ, ಪ್ರತಿಭೆಗಳು ಹೃದಯಹೀನವಾಗಿವೆಯೆ? ಎಂದು ಹೊರಗಿನವರು ಆಶ್ಚರ್ಯಪಡುತ್ತಿದ್ದಾರೆ" ಎಂದ ಗೋವಿಂದ ರಾವ್ ಭಿನ್ನ ಕೋಮುಗಳ ಜನರ ಮಧ್ಯೆ ಸಂವಹನದ ಅಭಾವ ಉಂಟಾಗಿರುವುದನ್ನು ಒತ್ತಿ ಹೇಳಿ, ಅದೇ ಸಮಾಜವನ್ನು ಛಿದ್ರಗೊಳಿಸುತ್ತಿದೆ ಎಂದು ಅಭಿಪ್ರಾಯ ಪಟ್ಟರು. ಗಾಂಧೀಜಿ, ಸಾಕ್ರೆಟೀಸ್, ಬಸವಣ್ಣ ಮುಂತಾದವರು ಜನರೆಲ್ಲರ ಹೃದಯಗಳನ್ನು ಒಗ್ಗೂಡಿಸಲು ಸಂವಹನವನ್ನು, ಸಂಘಟನೆಯನ್ನು ಬಳಸಿದ ಬಗೆಯನ್ನು ಅವರು ವಿವರಿಸಿದರು.

ಈ ಧರಣಿಯಲ್ಲಿ ಭಾಗವಹಿಸಿದ್ದ ಖ್ಯಾತ ಲೇಖಕಿ ಸಾರಾ ಅಬೂಬಕರ್ ಅವರು ಈಚೆಗೆ ಎಲ್ಲ ಕಡೆ ಅತಿರೇಕದ ವರ್ತನೆ ನಡೆಯುತ್ತಿದೆ ಎನ್ನುತ್ತ ಪಬ್ ಸಂಸ್ಕೃತಿ ನಮಗೆ ಹೊರಗಿನಿಂದ ಬಂದದ್ದೇ ಆದರೂ ಅದನ್ನು ಪ್ರವೇಶಿಸಿದವರನ್ನೆಲ್ಲ ಬಡಿದು, ಹಿಂಸಿಸುವುದೇ ಸಂಸ್ಕೃತಿಯಾಗಬಾರದು ಎಂದರು. ಮುಸ್ಲಿಂ ಮಹಿಳೆಯರ ಮೇಲೂ ಬುರ್ಖಾ ಧರಿಸುವ ಒತ್ತಾಯ ಹೆಚ್ಚುತ್ತಿದೆ. ಕೇವಲ ಎರಡು ಕಣ್ಣುಗಳನ್ನು ಮಾತ್ರ ತೆರೆದಿಟ್ಟುಕೊಂಡು ಸಾರ್ವಜನಿಕ ಸ್ಥಳ, ಕಛೇರಿಗಳಲ್ಲಿ ಕೆಲಸ ಮಾಡುವುದು ಕಷ್ಟವಾಗುತ್ತಿದೆ. ಅವರೂ ಸಮಾಜದಲ್ಲಿ ಎಲ್ಲರಂತೆ ಬೆರೆಯಲು ಬಿಡಬೇಕು ಅಂದರು. ಎಲ್ಲವೂ ತಾಲಿಬಾನೀಕರಣಗೊಳ್ಳುವ ಅಪಾಯವನ್ನು ಕುರಿತು ಎಚ್ಚರಿಸಿದರು.

ಮತ್ತೊಬ್ಬ ಖ್ಯಾತ ಚಿಂತಕ, ಲೇಖಕ ಜಿ. ರಾಜಶೇಖರ ಅವರು ಪಬ್ ಮೇಲೆ ನಡೆದ ಆಕ್ರಮಣ ತನ್ನಿಂದತಾನೇ ಪ್ರತ್ಯೇಕವಾದ ಆಕಸ್ಮಿಕ ಘಟನೆಯಲ್ಲ, ಇದೇ ಮಾದರಿಯ ಘಟನೆಗಳು ಹಿಂದೆಯೂ ಹಲವು ಸಲ ನಡೆದಿವೆಯೆಂಬುದನ್ನು ಉಲ್ಲೇಖಿಸಿದರು. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ನಾಜಿಗಳು ಅನುಸರಿಸಿದ ರಣತಂತ್ರದ ಮಾದರಿಯಲ್ಲೇ ಇಂದು ದೇಶದ ಬಲಪಂಥೀಯ ಶಕ್ತಿಗಳು ಹಿಂಸಾಚಾರವನ್ನೇ ದೃಶ್ಯವಾಗಿ ಪರಿವರ್ತಿಸುವ ಮೂಲಕ ಅಂಥ ಹಿಂಸಾಚಾರಗಳಿಗೆ ಸಾಮೂಹಿಕ ಅನುಮೋದನೆ ಗಳಿಸಿಕೊಳ್ಳಲು ಯತ್ನಿಸುತ್ತಿವೆ ಎಂಬುದರ ಬಗ್ಗೆ ಅವರು ಎಚ್ಚರಿಸಿದರು.

ರಾಜಶೇಖರ ಅವರು ಸೋಮಯಾಜಿಯವರ ವಿರುದ್ಧವಾಗಿ ಪದೇ ಪದೇ ಇಂತಹ ಮಾನಸಿಕ ದೌರ್ಜನ್ಯ ನಡೆಯುತ್ತಿದ್ದು ಅದನ್ನು ಖಂಡಿಸುವುದು ಅಗತ್ಯವೆಂದು ಹೇಳಿದರು.

ಪಟ್ಟಾಭಿರಾಮ ಸೋಮಯಾಜಿಯವರು ಪಬ್ ಆಕ್ರಮಣದ ಘಟನೆಯ ಅಮಾನವೀಯತೆಯನ್ನು ಖಂಡಿಸಿದ್ದರು. ಅದು "ರಾಮಸೇನೆಯಲ್ಲ ಅದು ರಾವಣಸೇನೆ" ಎಂದು ವ್ಯಂಗ್ಯವಾಗಿ ನುಡಿದರು ಎಂಬ ಆರೋಪ ಹೊರಿಸಿ ಎಬಿವಿಪಿ ವಿದ್ಯಾರ್ಥಿ ಮುಖಂಡರು ಕಾಲೇಜಿನ ತರಗತಿಗಳನ್ನು ಬಹಿಷ್ಕರಿಸಿ, ಪಟ್ಟಾಭಿಯವರ ವಿರುದ್ಧವಾಗಿ ಘೋಷಣೆಗಳನ್ನು ಕೂಗುತ್ತಾ, ಅವರನ್ನು ಕೆಲಸದಿಂದ ವಜಾ ಮಾಡಬೇಕೆಂದು ಆಗ್ರಹಿಸಿ ಪ್ರಿನ್ಸಿಪಾಲರಿಗೆ ಮನವಿ ಪತ್ರವನ್ನು ಅರ್ಪಿಸಿದ್ದರು.

ಒಬ್ಬ ಜವಾಬ್ದಾರಿಯುಳ್ಳ ನಾಗರಿಕನಾಗಿ, ಒಬ್ಬ ಶಿಕ್ಷಕನಾಗಿ ತಾವು ಈ ಪಬ್ ಆಕ್ರಮಣದಲ್ಲಿ ನಡೆದ ಕೋಮುದ್ವೇಷಪೂರಿತ ಹಿಂಸಾಚಾರವನ್ನು ಖಂಡಿಸಿದ್ದು ತಮ್ಮ ಕರ್ತವ್ಯವೇ ಆಗಿತ್ತು ಎಂಬುದಾಗಿ ಪಟ್ಟಾಭಿಯವರು ತಮ್ಮ ನಿಲುವನ್ನು ಪತ್ರಕರ್ತರಿಗೆ ಸ್ಪಷ್ಟಪಡಿಸಿದರು. ಅವರ ಈ ವಿಚಾರಕ್ಕೆ ಬೆಂಬಲವೂ ಮಾನವ ಸರಪಳಿ–ಪ್ರತಿಭಟನೆಯ ಸಂದರ್ಭದಲ್ಲಿ ವ್ಯಕ್ತವಾಯಿತು.

ಇದೇ ಮಾದರಿಯಲ್ಲಿ ಆ ಘಟನೆಯನ್ನು ಪ್ರತಿಭಟಿಸುವಂಥ ಮಾನವ ಸರಪಳಿಗಳನ್ನು ಲೈಟ್‌ಹೌಸ್ ಹಿಲ್ ಮೇಲೆ ರೋಷನಿ ನಿಲಯದ ಮುಂದೆಯೂ, ಬೆಸೆಂಟ್ ಕಾಲೇಜು ಹಾಗೂ ಬೈಂದೂರು ಸೇಂಟ್ ಆಗ್ನೆಸ್ ಕಾಲೇಜುಗಳೆದುರಲ್ಲೂ ನಡೆಸಲಾಯಿತು.

ಪಬ್‌ಕಲ್ಚರ್ ಎಂಬುದು ದೇಶದ ಇಂದಿನ ಆರ್ಥಿಕ ನೀತಿಯ ಫಲ. ಈ ಬೆಳವಣಿಗೆಗೆ ಧರ್ಮದ ಲೇಪಹಚ್ಚಿ ವಿನಾಶಕಾರಿ ಆಕ್ರಮಣಗಳನ್ನು ದೇಶದ ಪ್ರಜೆಗಳ ಮೇಲೆ, ಇತರ ಪ್ರಜೆಗಳು ನಡೆಸಲು ಹೊರಟಿರುವುದು ನಮ್ಮ ವೈಚಾರಿಕತೆಯ ಅಭಾವ ಹಾಗೂ ಕುರುಡುತನಗಳ ಸೂಚಕವಷ್ಟೆ.

*(ಆಧಾರಿತ)*



# ಮೌನ ಕ್ರಾಂತಿಯ ರೂವಾರಿಗಳು :
## ಹಾಸನ ಜಿಲ್ಲೆಯ ನವಸಾಕ್ಷರ ಅಭಿವೃದ್ಧಿ ಸಂಘಗಳು

● *ಕ್ಷೀರಸಾಗರ*

**ಮೂ**ವತ್ತು ವರ್ಷದ ಲೀಲಾವತಿ ಅಡಿಗೆ ಮಾಡುತ್ತಿದ್ದಾಗ ಆಕಸ್ಮಿಕವಾಗಿ ಬೆಂಕಿ ತಗುಲಿ ಮೈಯೆಲ್ಲಾ ಹತ್ತಿ ಉರಿಯ ತೊಡಗಿತು. ಮನೆಯಲ್ಲಿದ್ದ ಎಂಟು ಹಾಗು ಆರು ವರ್ಷದ ಮಕ್ಕಳಿಬ್ಬರು ಏನು ಮಾಡಬೇಕೆಂದು ದಿಕ್ಕು ತೋಚದೆ ಜೋರಾಗಿ ಅಳತೊಡಗಿದರು. ಈ ಮಕ್ಕಳ ಆಕ್ರಂದನ, ಹೆಂಗಸಿನ ಚೀರಾಟ ಕೇಳಿಸಿಕೊಂಡ ಜನ ಮನೆಯೊಳಗೆ ನುಗ್ಗಿದ್ದರು. ಒಳಗೆ ಬಂದು ನೋಡುವಷ್ಟರಲ್ಲಿ ಅವಳು ಇಬ್ಬರು ಪುಟ್ಟ ಮಕ್ಕಳನ್ನು ತಬ್ಬಲಿ ಮಾಡಿ ಬೆಂಕಿಯಲ್ಲಿ ಬೆಂದು ಹೋಗಿದ್ದಳು.

ಅಪ್ಪ ಅಮ್ಮ ಇಬ್ಬರೂ ಇಲ್ಲದ, ಯಾರೂ ದಿಕ್ಕಿಲ್ಲದ ಮಕ್ಕಳನ್ನು ಸಾಕಿ ಸಲಹಿ ಶಾಲೆಗೆ ಸೇರಿಸಿದ್ದು, ಅವರನ್ನು ಓದಿಸಿ ದೊಡ್ಡವರನ್ನಾಗಿ ಮಾಡಿದ್ದು ಮಹಿಳೆಯರೇ ನಡೆಸಿಕೊಂಡು ಹೋಗುತ್ತಿದ್ದ 'ನವಸಾಕ್ಷರರ ಅಭಿವೃದ್ಧಿ ಸಂಘ.'

ಬೆಂಕಿಯಲ್ಲಿ ಬೆಂದು ಹೋದ ಮಹಿಳೆ, ಗಂಡ ಬಿಟ್ಟು ಹೋದ ನಂತರ ಇಬ್ಬರು ಮಕ್ಕಳನ್ನು ಬಹಳ ಕಷ್ಟಪಟ್ಟು ಸಾಕುತ್ತಿದ್ದಳು. ಈ ಮಕ್ಕಳಿಗೆ ಹೊಸ ಬಟ್ಟೆ ಹೊಲಿಸಿ ಶಾಲೆಗೆ ಸೇರಿಸಿ ಅವರ ಬದುಕನ್ನು ಹಸನು ಮಾಡಬೇಕು ಎಂದು ಕನಸು ಕಂಡಿದ್ದಳು. ಅದಕ್ಕಾಗಿಯೇ ಅವಳು ಒಂದುತಿಂಗಳ ಹಿಂದೆ ಈ ಉಳಿತಾಯ ಸಂಘಕ್ಕೆ 40 ರೂಪಾಯಿಗಳನ್ನು ಕಟ್ಟಿದಳು.

ಅವಳು ಬೆಂಕಿಯಲ್ಲಿ ಬೆಂದು ಹೋದರೂ ಅವಳ ಕನಸುಗಳು ಬೆಂದು ಬೂದಿಯಾಗಬಾರದು ಎಂದು ಹಟತೊಟ್ಟವರು 'ಸುರಭಿ ನವಸಾಕ್ಷರ ಅಭಿವೃದ್ಧಿ ಉಳಿತಾಯ ಸಂಘದ' ಮಹಿಳೆಯರು.

ಈ ಉಳಿತಾಯ ಸಂಘದ ಮಹತ್ವದ ಸಾಧನೆಗಳು: ಮಾನವೀಯತೆ, ಒಬ್ಬರ ಕಷ್ಟ ಸುಖಕ್ಕೆ ದನಿಯಾಗುವ, ಸಂಘಟಿತವಾಗಿ ಸಹಕರಿಸುವ ಓದು ಬರಹ ಮುಂದುವರೆಸುವ ಕಾಯಕಲ್ಪಕ್ಕೆ ತೊಡಗಿರುವುದು. ಇಂತಹದ್ದು ಇದೊಂದೇ ಸಂಘಟನೆಯಲ್ಲ. ಹಾಸನ ಜಿಲ್ಲೆಯಲ್ಲಿ ಇಂತಹ ಒಂದು ಸಾವಿರದ ಆರುನೂರು ಉಳಿತಾಯ ಸಂಘಗಳು ತಮ್ಮ ಬದುಕಿನ ದಾರಿಗೆ ಬೆಳಕಿನ ದೀವಿಗೆಗಳನ್ನು ಬೆಳಗಿವೆ.

### ಉಳಿತಾಯದಿಂದ ಅಭಿವೃದ್ಧಿಯಾದ ನವಸಾಕ್ಷರರು

ಹಾಸನಜಿಲ್ಲೆಯಲ್ಲಿ 1995ರಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನ ವನ್ನು ಪ್ರಾರಂಭಿಸಲಾಯಿತು. ಗ್ರಾಮ ಪಂಚಾಯತಿಯಿಂದ ಜಿಲ್ಲಾ ಪಂಚಾಯತಿಯವರೆಗೆ ಹಲವು ಹಂತಗಳಲ್ಲಿ 250 ಮಂದಿ ಕಾರ್ಯಕರ್ತರು ಜಿಲ್ಲಾ ಸಾಕ್ಷರತಾ ಸಮಿತಿಯ ಅಡಿಯಲ್ಲಿ ಕಾರ್ಯ ನಿರ್ವಹಿಸಿದರು. 1999ರ ವರೆಗೆ ನಡೆದ ಆಂದೋಲನವು ನಿರೀಕ್ಷಿತ ಮಟ್ಟದಲ್ಲಿ ಗುರಿ ಮುಟ್ಟಲು ಸಾಧ್ಯವಾಗದಿದ್ದರೂ ಕೆಲವು ಮಟ್ಟಿಗೆ ಯಶಸ್ಸು ಸಾಧಿಸಿತು. ಈ ಯಶಸ್ಸಿಗೆ ಕಾರಣ ಸಂಯೋಜಕರುಗಳ ಅವಿರತ ಶ್ರಮ.

ಹಳ್ಳಿ ಹಳ್ಳಿಗಳಲ್ಲಿ ಹಗಲೂ ರಾತ್ರಿ ಎನ್ನದೇ ಸುತ್ತಾಡಿ ಸಾಕ್ಷರೋತ್ತರ ಕಾರ್ಯಕ್ರಮದ ಮೂಲಕ ನವಸಾಕ್ಷರರ ಓದು ಬರಹದ ಆಸಕ್ತಿಯನ್ನು ಉಳಿಸಲು ಪ್ರಯತ್ನಿಸಿದರು. ಆದರೆ ಸಾಕ್ಷರತಾ ಆಂದೋಲನದ ಸಂದರ್ಭದಲ್ಲಿ ಜನರಲ್ಲಿ ಇದ್ದ ಹುಮ್ಮಸ್ಸು, ಕಸುವು ಸಾಕ್ಷರೋತ್ತರ ಹಂತದಲ್ಲಿ ಇರಲಿಲ್ಲ. ಬಡತನದ ಬೇಗೆಯಲ್ಲಿ ಬೆಂದು ಬಸವಳಿಯುತ್ತಿದ್ದ ಜನರಿಗೆ ಓದಿಗಿಂತ ದೈನಂದಿನ ಬದುಕಿನ ಸಮಸ್ಯೆಯೇ ಬೃಹತ್ತಾಗಿ ಕಾಡತೊಡಗಿತು.

ನವಸಾಕ್ಷರರ ಸಮಸ್ಯೆಗಳಿಗೆ ಸ್ಪಂದಿಸುವ ಯಾವ ಕಾರ್ಯಕ್ರಮಗಳೂ ಜಿಲ್ಲಾ ಸಾಕ್ಷರತಾ ಸಮಿತಿಯ ಅಡಿಯಲ್ಲಿ ಇರಲಿಲ್ಲ. ಜಿಲ್ಲಾ ಸಾಕ್ಷರತಾ ಸಮಿತಿಯ ಕಾರ್ಯಕರ್ತರಿಗೆ ಕಾಡಿದ ದೊಡ್ಡ ಸಮಸ್ಯೆ ಎಂದರೆ, ಲಕ್ಷಾಂತರ ಸಂಖ್ಯೆಯ ನವಸಾಕ್ಷರರು ಮರಳಿ ಅನಕ್ಷರಸ್ಥರಾಗಿಬಿಡುವ ಅಪಾಯದಿಂದ ಅವರನ್ನು ಪಾರು ಮಾಡುವುದು ಹೇಗೆ? ಎಂಬುದು.

ಕೆಲವು ಜಿಲ್ಲೆಗಳಲ್ಲಿ ನವಸಾಕ್ಷರರಿಗೆ ಸರಿಯಾದ ಕಾರ್ಯಕ್ರಮವನ್ನು ರೂಪಿಸದೆ ಇರುವುದರಿಂದ ಅವರು ಮರಳಿ ಅನಕ್ಷರಸ್ಥರಾಗಿಬಿಟ್ಟಿರುವ ಜೀವಂತ ಉದಾಹರಣೆಗಳು ಇವರ ಕಣ್ಣ ಮುಂದೆ ಇದ್ದವು. ನಾಲ್ಕೈದು ವರ್ಷಗಳಿಂದ ಸತತವಾಗಿ ಹಾಕಿದ ಶ್ರಮ ವ್ಯರ್ಥವಾಗಿಬಿಡುತ್ತದೆ, ಎಲ್ಲ ಶ್ರಮವು ಹೊಳೆಯಲ್ಲಿ ಹುಣಸೆ ಹಣ್ಣನ್ನು ತೊಳೆದಂತೆ ಆಗುತ್ತದಲ್ಲ ಎನ್ನುವ ವಿಷಯ ಅವರನ್ನು ಕಾಡತೊಡಗಿತು. ಇಷ್ಟೆಲ್ಲದರ ನಡುವೆಯೂ ಸಾಕ್ಷರತಾ ಸಂಯೋಜಕರು ಹಳ್ಳಿಗಳಿಗೆ ಭೇಟಿ ಕೊಟ್ಟು ಜನರ ಜೊತೆ ಬೆರೆಯುವುದನ್ನು ನಿಲ್ಲಿಸಿರಲಿಲ್ಲ. ಆದರೂ ಏನೂ ದಾರಿ ತೋಚದೆ ಒಂದು ರೀತಿಯ ಶೂನ್ಯ ಆವರಿಸುತ್ತಿದೆ ಎನ್ನುವ ಮನೋಭಾವನೆ ಉಂಟಾಗುತ್ತಿತ್ತು.

ಈ ಸಂದರ್ಭದಲ್ಲಿ ಕತ್ತಲೆಯ ರಾತ್ರಿಯ ಮಿಂಚಿನಂತೆ ಹೊಳೆದದ್ದು "ಸ್ವಸಹಾಯ ಸಂಘಗಳು" ಎಂಬ ಪರಿಕಲ್ಪನೆ. ಈ ಪರಿಕಲ್ಪನೆಗೆ ಜೀವ ತುಂಬಿದವರು ಲೋಕ ಶಿಕ್ಷಣ ಇಲಾಖೆಯ ನಿರ್ದೇಶಕಿಯಾಗಿದ್ದ ಉಮಾ ಮಹದೇವನ್‌ರವರು ಹಾಗೂ ಜಿಲ್ಲಾಧಿಕಾರಿಯಾಗಿದ್ದ ರಾಕೇಶ್ ಸಿಂಗ್‌ರವರು. ಮುಳುಗುತ್ತಿದ್ದವನಿಗೆ ಹುಲ್ಲುಕಡ್ಡಿ ಸಿಕ್ಕಿದರೂ ಆಸರೆಯೇ ಆಗುತ್ತದೆ. ಬದುಕಿನ ದೋಣಿಗೆ ಇದು ಬರಿಯ ಹುಲ್ಲುಕಡ್ಡಿಯಾಗದೇ ಕಷ್ಟ ಕೋಟಲೆಗಳ ಅಲೆಗಳನ್ನು ಎದುರಿಸಿ ಮುನ್ನುಗ್ಗಲು ಹರಿಗೋಲೇ ಆಯಿತು.

ಪ್ರಾರಂಭದಲ್ಲಿ ಚಟುವಟಿಕೆಯಿಂದಿರುವ ಕೆಲವೇ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಕಲಿಕಾಕೇಂದ್ರಗಳು ನಡೆಯುತ್ತಿದ್ದ ಎಡೆಯಲ್ಲಿ ಸ್ವಸಹಾಯ ಸಂಘಗಳನ್ನು ಪ್ರಾರಂಭಿಸಲಾಯಿತು. ಆಲೂರು ತಾಲ್ಲೂಕಿನ ಭರತವಳ್ಳಿ, ಬೇಲೂರು ತಾಲ್ಲೂಕಿನ ಸವಾಸಿಹಳ್ಳಿ ಹಾಗೂ ದಾಸನ ಕೊಪ್ಪಲಿನಲ್ಲಿ ಸಂಘಗಳನ್ನು ಪ್ರಾರಂಭಿಸಿದರು.

### ನವಸಾಕ್ಷರರ ಹೊಸ ಬದುಕಿನೆಡೆಗೆ ಸಾವಿರಾರು ಹೆಜ್ಜೆಗಳು

ಎರಡು ಮೂರು ಗ್ರಾಮಗಳಲ್ಲಿ ಪ್ರಾರಂಭವಾದ ನವಸಾಕ್ಷರರ ಅಭಿವೃದ್ಧಿಸಂಘಗಳ ಸುದ್ದಿ ಅಕ್ಕಪಕ್ಕದ ಊರಿನವರಿಗೆ ಹಬ್ಬಿತು. ಅವರೂ ಸಂಘಗಳನ್ನು ಸ್ಥಾಪಿಸಿದರು. ಹೀಗೆ ದೀಪದಿಂದ ದೀಪ ಹಚ್ಚಿ ಸಾವಿರಾರು ಜ್ಯೋತಿಗಳು ಬೆಳಗಿದವು. ಉಳಿತಾಯ ಸಂಘಗಳಾದವು. 2000ನೇ ಇಸವಿಯಲ್ಲಿ ಪ್ರಾರಂಭವಾದ 2-3 ಸಂಘಗಳ ಸಂಖ್ಯೆ ಈಗ 2003ನೇ

ಇಸವಿಗೆ 1600 ಆಗಿದೆ. ಇದರ ಅನುಕೂಲತೆಯನ್ನು ಪಡೆಯುತ್ತಿರುವ ಮಹಿಳಾ ಸದಸ್ಯರ ಸಂಖ್ಯೆ ಒಂದು ಲಕ್ಷದ ಮೂವತ್ತು ಸಾವಿರ.

'ಇಷ್ಟೊಂದು ಹೆಚ್ಚಿನ ಸಂಖ್ಯೆಯಲ್ಲಿ ಬೆಳೆಯಲು ಈ ಉಳಿತಾಯ ಸಂಘಗಳಲ್ಲಿ ಇರುವ ಮಹತ್ವವೇನು?' ಎಂದು ಜಿಲ್ಲಾ ಸಾಕ್ಷರತಾ ಸಮಿತಿ ಕಾರ್ಯದರ್ಶಿ ಪಾಷಾ ಅವರಿಗೆ ಕೇಳಿದಾಗ ಅವರು ಕುತೂಹಲದಿಂದ ವಿವರಿಸಿದರು.

ನವಸಾಕ್ಷರರಲ್ಲಿ ವ್ಯಕ್ತಿತ್ವ ಬೆಳವಣಿಗೆ, ಬದುಕಿನಲ್ಲಿ ಸ್ವಾವಲಂಬನೆ, ಸಬಲೀಕರಣವಾಗಬೇಕು ಎಂಬ ಎಲ್ಲ ಆಶಯಗಳೂ ಸ್ವಸಹಾಯ ಸಂಘದ ಆಶಯ ಕೂಡ ಆಗಿರುವುದರಿಂದ ಈ ಎರಡೂ ಅಂಶಗಳು ಒಂದುಗೂಡಲು ಸಾಧ್ಯವಾಯಿತು. ಸ್ವಸಹಾಯ ಸಂಘಗಳು ನವಸಾಕ್ಷರರು ಹಿಂದಕ್ಕೆ ಮರಳಿ, ಅನಕ್ಷರಸ್ಥರಾಗದಿರಲು ಸಹಕರಿಸಿದುವು. ಇವು ಬದುಕಿನ ಆರ್ಥಿಕ ಸಮಸ್ಯೆಗಳಿಗೆ ಸ್ಪಂದಿಸಿದ್ದರಿಂದ ಕಲಿಕೆಯನ್ನು ಜೀವಂತವಾಗಿಡಲು ಕಾರಣವಾದುವು.

ಉದಾಹರಣೆಗೆ ನೋಡುವುದಾದರೆ ಸ್ವಸಹಾಯ ಸಂಘದ ಸಭಾ ನಡವಳಿಕೆಗಳನ್ನು ಬರೆಯುವುದು, ಲೆಕ್ಕ ಪುಸ್ತಕಗಳನ್ನು ಬರೆಯುವುದು, ಬರೆದದ್ದನ್ನು ಸಭೆಗೆ ಓದಿ ಹೇಳುವುದು ಇಂತಹ ಜವಾಬ್ದಾರಿಗಳನ್ನು ಪ್ರತಿಯೊಬ್ಬ ಸದಸ್ಯರಿಗೂ ಸರದಿಯ ಪ್ರಕಾರ ಕೊಡುತ್ತಿದ್ದೆವು. ಹೀಗಾಗಿ ಸಂಘದ ಪ್ರತಿಯೊಬ್ಬರೂ ಓದು ಬರಹ ಮುಂದುವರಿಸಿಕೊಂಡು ಹೋಗಲು ಸಹಕಾರಿಯಾಯಿತು.

ಸಭೆಯ ಅಧ್ಯಕ್ಷತೆ ವಹಿಸುವ ಜವಾಬ್ದಾರಿಯನ್ನು ಪ್ರತಿಯೊಬ್ಬರಿಗೂ ಕೊಡುತ್ತಿದ್ದುದರಿಂದ ನಾಯಕತ್ವದ ಬೆಳವಣಿಗೆಗೆ ಸಹಕಾರಿಯಾಯಿತು. ಅಲ್ಲದೆ ಪ್ರತಿವಾರವೂ ಬ್ಯಾಂಕಿಗೆ ಹೋಗಿ ಹಣಕಟ್ಟುವ ಜವಾಬ್ದಾರಿಯನ್ನು ಬೇರೆ ಬೇರೆಯವರು ನಿರ್ವಹಿಸಬೇಕಾಗಿತ್ತು. ಹೀಗಾಗಿ ಹೊಸಿಲುದಾಟಿ ಹೊರಬರದಿದ್ದ ಮಹಿಳೆಯರು ಪಕ್ಕದ ಊರು ಅಥವಾ ಪಟ್ಟಣದ ಬ್ಯಾಂಕುಗಳಿಗೆ ಹೋಗಿ ಹಣಕಟ್ಟುವ ಅಥವಾ ಹಣ ಪಡೆಯುವ ಕೆಲಸದಲ್ಲಿ ನಿರತರಾದರು. ಇಂತಹ ಅನುಭವಗಳು ಅವರ ಸೀಮಿತ ಬದುಕಿನ ಗೋಡೆಗಳನ್ನು ಸೀಳಿ ಹೊರಬರುವಂತೆ ಮಾಡಿದವು.

ಬ್ಯಾಂಕುಗಳು, ಹಣದ ವ್ಯವಹಾರ ಇವೆಲ್ಲ ಏನಿದ್ದರೂ ದೊಡ್ಡವರ ವ್ಯವಹಾರ. ನಮ್ಮ ಬದುಕಿನ ರೀತಿಗೆ ಎಟುಕದೇ ಇರುವಂತಹುದು ಎಂದು ಮಾನಸಿಕವಾಗಿ ಮುದುಡಿ ಹೋಗಿದ್ದ ಜನರಿಗೆ ಅದರಲ್ಲೂ ಮಹಿಳೆಯರಿಗೆ ಒಳ್ಳೆಯ ಬದುಕಿನ ದಿಗಂತವನ್ನೇ ತೆರೆದಿಟ್ಟಂತಾಯಿತು. ಈಗ ಅವರು ಬಡವರಾಗಿದ್ದರೂ ಹಿಂದುಳಿದವರು ಆಗಿದ್ದರೂ ಮಹಿಳೆಯರಾಗಿದ್ದರೂ ಅವರಿಗೆ ನವಸಾಕ್ಷರತೆಯ ಬಲ ಬಂದಿದೆ, ನಾಯಕತ್ವದ ಗುಣ ಬಂದಿದೆ. ಸೀಮಿತ ಬದುಕಿನ ಪರಿಧಿಯನ್ನು ದಾಟಿ ವಿಶಾಲಜಗತ್ತಿಗೆ ಕಾಲಿಡುವ ಶಕ್ತಿ ಬಂದಿದೆ.

ನವಸಾಕ್ಷರರ ಅಭಿವೃದ್ಧಿ ಸಂಘಗಳ ಇಂತಹ ಗುಣವೇ ಒಂದರಿಂದ ಹತ್ತು ಸಂಘಗಳಾಗಲು, ಹತ್ತರಿಂದ ನೂರು ಸಂಘಗಳು, ನೂರರಿಂದ ಸಾವಿರ ಸಂಘಗಳಾಗಲು ಕಾರಣವಾಗಿದೆ.

**ಮೌನ ಕ್ರಾಂತಿಯ ಹರಿಕಾರರು ಈ ಮಹಿಳೆಯರು**

ಹಾಸನ ಜಿಲ್ಲೆಯಲ್ಲಿ 1999–2000ನೇ ಇಸವಿಯಲ್ಲಿ ಪ್ರಾರಂಭವಾದ ನವಸಾಕ್ಷರರ ಅಭಿವೃದ್ಧಿ ಸಂಘಗಳ ಹರಿಕಾರರಾದವರು ಬಡತನದ ಬೇಗೆಯಲ್ಲಿ ಬೆಂದು ಬಸವಳಿದಿದ್ದ ಮಹಿಳೆಯರು. ಈ ಮಹಿಳೆಯರಲ್ಲಿ ಬಹುಪಾಲು ಹರಿಜನರು ಹಾಗೂ ಹಿಂದುಳಿದ ವರ್ಗಕ್ಕೆ ಸೇರಿದವರು. ಇವರು ಕಾಫಿ ತೋಟಗಳಲ್ಲಿ, ಹೊಲ ಗದ್ದೆಗಳಲ್ಲಿ ದಿನಗೂಲಿ ಮಾಡುವವರು. ಬೀಡಿ ಕಾರ್ಮಿಕರು, ಬೇರೆಯವರ ಮನೆಗಳಲ್ಲಿ ಕೆಲಸ ಮಾಡುವ ಮಹಿಳೆಯರು, ಹಮಾಲಿಗಳ ಮನೆಯವರು. ಇವರ ದಿನಗೂಲಿ 40 ರೂಪಾಯಿಗಿಂತ ಕಡಿಮೆ. ಹೆಚ್ಚಿನ ಸಂಖ್ಯೆಯಲ್ಲಿ ಕಾಫಿ ತೋಟದಲ್ಲಿ ಕೂಲಿಗಳಾಗಿ ದುಡಿಯುವವರು ಹಾಗೂ ಕಾಫಿ ಕ್ಯೂರಿಂಗ್‌ಗಳಲ್ಲಿ ಕೆಲಸ ಮಾಡುವವರು. ಕಾಫಿಬೀಜದ ಬೆಲೆಯು ಗಣನೀಯ ಪ್ರಮಾಣದಲ್ಲಿ ಇಳಿಕೆಯಾದದ್ದರಿಂದ ಕೂಲಿಯೂ ಕಡಿಮೆಯಾಯಿತು. ಅಲ್ಲದೇ ಕಾಫಿ ತೋಟಗಳಿಗೆ ಕೂಲಿಯಾಳುಗಳನ್ನು ನೇಮಿಸಿಕೊಳ್ಳುವುದೂ ಕಡಿಮೆಯಾಯಿತು. ಹೀಗಾಗಿ ನಿರುದ್ಯೋಗ ಸಮಸ್ಯೆ ಇವರನ್ನು ಕಾಡತೊಡಗಿತು.

ಇಂತಹ ತಿರುವಿನ ಸಂದರ್ಭದಲ್ಲಿ ಇವರಿಗೆ ಆಸರೆಯಾಗಿ ದೊರೆತಿದ್ದು ಸ್ವಸಹಾಯ ಸಂಘಗಳು. ಇವರ ಸಮಸ್ಯೆಗಳಿಗೆ ಇವರಲ್ಲೇ ಉತ್ತರ ಕಂಡುಕೊಳ್ಳುವ, ಹೊಸ ಮಾರ್ಗೋಪಾಯವನ್ನು ರೂಪಿಸುವ, ಒಂದು ಬೆರಳಾಗಿ ಒಬ್ಬರು ಕಾರ್ಯನಿರ್ವಹಿಸುವುದರ ಬದಲಾಗಿ ಹತ್ತು ಬೆರಳಾಗಿ ಹತ್ತು ಜನ ಒಂದು ಗುಂಪಾಗಿ ಕಾರ್ಯನಿರ್ವಹಿಸುವ ಮೂಲಕ ತಮ್ಮನ್ನು ಸದಾ ಕಾಡುವ ಹಸಿವು ಮತ್ತು ಬಡತನದಿಂದ ಪಾರಾಗುವ ದಾರಿಯನ್ನು ಕಂಡುಕೊಂಡರು.

ಇದುವರೆಗೂ ತಮ್ಮ ಸಮಸ್ಯೆಗಳನ್ನು ಇತರರು ಬಗೆಹರಿಸಬೇಕು, ಸರ್ಕಾರ ಅಥವಾ ಸಂಘ ಸಂಸ್ಥೆಗಳು ತಮ್ಮ ನೆರವಿಗೆ ಬಂದರೆ ಮಾತ್ರ ಬದುಕಿನ ದಾರಿ ಕಂಡುಕೊಳ್ಳಲು ಸಾಧ್ಯವೆಂದು ನಂಬಿದ್ದವರಿಗೆ ಈಗ ದೊರೆತ ಮಾಂತ್ರಿಕ ದಂಡ ಎಂದರೆ, ತಮ್ಮ ಸಮಸ್ಯೆಗಳನ್ನು ಒಬ್ಬಂಟಿಯಾಗಿ ಬಗೆಹರಿಸಿಕೊಳ್ಳಲಾಗುವುದಿಲ್ಲ. ಹತ್ತು ಹನ್ನೆರಡು ಜನ ಒಂದುಗೂಡಿದರೆ ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳಬಹುದು ಎಂಬ ಸರಳ ಸೂತ್ರ.

ಪ್ರಾರಂಭದಲ್ಲಿ ತಮ್ಮ ಸಮಸ್ಯೆಗಳಿಗೆ ತಮ್ಮಲ್ಲೇ ಉತ್ತರ ಇದೆ ಎಂಬುದರ ಬಗ್ಗೆ ಅನುಮಾನವಿತ್ತು. ಆದರೆ 3–4 ತಿಂಗಳು ಉಳಿತಾಯಕ್ಕೆ ತೊಡಗಿದಾಗ ಎಂತಹ ಶಕ್ತಿ ಉದಯವಾಗಲು ಸಾಧ್ಯ ಎಂಬುದನ್ನು ಅವರು ಪ್ರತ್ಯಕ್ಷವಾಗಿ ಮನಗಾಣತೊಡಗಿದರು.

ಉದಾಹರಣೆಯಾಗಿ ಒಂದು ಸ್ವಸಹಾಯ ಗುಂಪಿನ ಹುಟ್ಟು ಬೆಳವಣಿಗೆಯನ್ನು ನೋಡುವುದಾದರೆ, 15 ಮಂದಿ ಮಹಿಳೆಯರ ಒಂದು ಗುಂಪು ಪ್ರತಿಯೊಬ್ಬರು ಒಂದು ವಾರಕ್ಕೆ 10 ರೂಪಾಯಿಗಳನ್ನು, ಉಳಿತಾಯ ಮಾಡಬೇಕು, 6 ತಿಂಗಳ ತನಕ ಈ ಉಳಿತಾಯವು ತಪ್ಪದೇ ಮುಂದುವರಿಯಬೇಕು ಎಂದು ತೀರ್ಮಾನಿಸುತ್ತದೆ. ಪರಸ್ಪರ

ನಂಬಿಕೆ ಇರುವ ಈ ಗುಂಪು ಒಂದು ವಾರಕ್ಕೆ 150 ರೂಪಾಯಿಗಳನ್ನು, ತಿಂಗಳಿಗೆ 600 ರೂಪಾಯಿಗಳನ್ನು, ಆರು ತಿಂಗಳಿಗೆ 3600 ರೂಪಾಯಿಗಳನ್ನು ಉಳಿತಾಯ ಮಾಡುತ್ತದೆ. 5-10 ರೂಪಾಯಿಗಳಿಗೆಲ್ಲ ವಿಪರೀತ ಪರದಾಡುತ್ತಿದ್ದ ಮಹಿಳೆಯರ ಕೈಯಲ್ಲಿ ಈಗ 3600 ರೂಪಾಯಿಗಳಿವೆ. ಬದುಕಿಗೆ ಯಾವುದೇ ರೀತಿಯಲ್ಲೂ ಹೊರೆಯಾಗ ದಂತೆ ಒಂದು ವಾರಕ್ಕೆ 10 ರೂಪಾಯಿ ಮಾತ್ರ ಕೊಟ್ಟ ಹಣ ಈಗ ಒಂದು ದೊಡ್ಡ ಮೊತ್ತವಾಗಿ ಅವರ ಬಳಕೆಗೆ ಹಾಗೂ ಮರುಪಾವತಿಗೆ ಸಿದ್ಧವಾಗಿದೆ.

ಈ ಹಣವನ್ನು ತೀರ ಅಗತ್ಯವಿರುವ ಮಹಿಳೆಯರಿಗೆ ತಿಂಗಳಿಗೆ ಶೇಕಡ 2 ರೂಪಾಯಿ ಸೇವಾ ಶುಲ್ಕವನ್ನು ಸೇರಿಸಿ ಮರುಪಾವತಿ ಮಾಡುವಂತೆ ಹಣವನ್ನು ಸಾಲದ ರೂಪದಲ್ಲಿ ನೀಡಲಾಗುವುದು. ಆದರೆ ಸಾಲ ಬೇಕಾದವರು ತಾವೇ ಸ್ವತಃ ತಮ್ಮ ಕೈಯಾರ ಅರ್ಜಿ ಬರೆಯಬೇಕು, ಹಾಗೆ ಬರೆದಾಗ ಮಾತ್ರ ಸಾಲ ದೊರೆಯುವುದು. ಹೀಗೆ ನವಸಾಕ್ಷರರು ಕ್ರಿಯಾತ್ಮಕವಾಗಿ ಸಾಕ್ಷರತೆಗೆ ತೊಡಗಿಕೊಳ್ಳಲು ಅವಕಾಶವಾಯಿತು.

ಮೊದಲು ಸಾಕ್ಷರ ಸಂಯೋಜಕರು ಹಳ್ಳಿಗಳಿಗೆ ಹೋದರೆ ಕರೆದು ಮಾತನಾಡಿಸುವವರೇ ಇರಲಿಲ್ಲ. ಕಲಿಯಲು ಬನ್ನಿ ಎಂದರೆ ಬೆನ್ನು ತಿರುಗಿಸಿಕೊಂಡು ಹೋಗುತ್ತಿದ್ದರು. ಈಗ ಸಂಯೋಜಕರನ್ನು ನಮ್ಮ ಹಳ್ಳಿಗೆ ಬನ್ನಿ, ನಾವು ಕಲಿಯಲು ಬರುತ್ತೇವೆ, ಸ್ವಯಂ ಸೇವಕರನ್ನು ಗುರುತಿಸಿಕೊಡಿ ಎಂದು ದುಂಬಾಲು ಬೀಳುತ್ತಾರೆ. ಈ ಹಿಂದೆ ಅನಕ್ಷರಸ್ಥರಾಗಿ ಉಳಿದಿರುವ ಜನರನ್ನು "ನೀವು ಕಲಿಯಬೇಕು" ಎಂದು ಸಂಯೋಜಕರುಗಳು ಬಲವಂತ ಮಾಡುತ್ತಿದ್ದರು. ಈಗ ಜನರೇ ಸಂಯೋಜಕರಿಗೆ ನಮಗೆ ಕಲಿಸಬನ್ನಿ ಎಂದು ಬಲವಂತ ಮಾಡುತ್ತಿದ್ದಾರೆ. ಇಂತಹ ಒಂದು ಅಭೂತ ಮಾನಸಿಕ ಬದಲಾವಣೆಯನ್ನು 'ಮೌನಕ್ರಾಂತಿ' ಎಂದು ಕರೆಯಲೇಬೇಕಾಗಿದೆ.

ದಶಕಗಳಿಂದ, ಅತಿ ಚಟುವಟಿಕೆಯಿಂದ, ತಾತ್ವಿಕತೆಗೆ ಬದ್ಧವಾಗಿ ಕೆಲಸ ಮಾಡಿದ ಜನಪರ ಸಂಘಟನೆಗಳು ಸಾಧಿಸಿರುವ ಬದಲಾವಣೆಗಳಿಗಿಂತ ಇಲ್ಲಿ ನಡೆದಿರುವ ಜನರ ನಡುವಿನ ಮೌನಕ್ರಾಂತಿ ಹೆಚ್ಚು ಪರಿಣಾಮಕಾರಿಯಾಗಿದೆ.

ಇಲ್ಲಿ ಬಲಾವಣೆಯ ಹರಿಕಾರರು ಕಾರ್ಯಕರ್ತರಲ್ಲ, ಜನ. ಜನರು ತಮ್ಮನ್ನೇ ತಾವು ನೇರವಾಗಿ ತೊಡಗಿಸಿಕೊಂಡು ತಮ್ಮ ಸ್ವಶಕ್ತಿಯಿಂದ ತಮಗೆ ಬೇಕಾದ ರೀತಿಯ ಬದಲಾವಣೆಯನ್ನು ಪಡೆದಿರುವುದು ಅತ್ಯಂತ ಮೌಲಿಕವಾದದ್ದು.

ಜನರಿಗೆ ಎಂತಹ ಬದಲಾವಣೆ ಬೇಕು ಎಂಬುದನ್ನು ಇತರರು ನಿರ್ಧರಿಸುವುದಕ್ಕಿಂತ ಜನರೇ ತಾವು ಯಾವ ರೀತಿಯಲ್ಲಿ ಬದಲಾಗಬೇಕು ಮತ್ತು ಬೆಳೆಯಬೇಕು ಎಂಬುದನ್ನು ನಿರ್ಧರಿಸಿ ಕಾರ್ಯ ಪ್ರವೃತ್ತರಾಗಿರುವುದು ಜನರ ನಡುವಿನಿಂದ ಹುಟ್ಟಿದ ಒಂದು ನಿಜವಾದ ಬೆಳವಣಿಗೆ.

**ಮಹಿಳೆಯರು ಆರ್ಥಿಕವಾಗಿ ಸಬಲರಾದಾಗ**

ಹಾಸನ ಜಿಲ್ಲೆಯಲ್ಲಿ ಬಡತನದ ಬೇಗೆಯಲ್ಲಿ ಬೇಯುತ್ತಿದ್ದ ಸಾವಿರಾರು ಮಹಿಳೆಯರು ಇಂದು ಇಲಾಯಿತಿ ಹಸುಗಳ ಒಡೆಯರು. ಆದಾಯ ತರುವ ಹಂದಿ ಹಾಗು ಕುರಿಗಳನ್ನು ಸಾಕಿದ್ದಾರೆ. ಮೈಕ್‌ಸೆಟ್, ಶಾಮಿಯಾನ, ಅಡಿಗೆ ಪಾತ್ರೆಗಳನ್ನು ಬಾಡಿಗೆಗೆ ಕೊಡುತ್ತಾರೆ.

ಸರ್ಕಾರದಿಂದ ರೂಪಿತವಾದ ಸ್ವರ್ಣಜಯಂತಿ ಗ್ರಾಮೀಣ ಸ್ವ-ರೋಜ್‌ಗಾರ್ ಯೋಜನೆಯ ಅಡಿಯಲ್ಲಿ ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯರಿಗೆ ತಲಾ 10 ಸಾವಿರ ರೂಪಾಯಿಗಳನ್ನು ಕೊಡಲಾಗುತ್ತದೆ. ಇದರಲ್ಲಿ ಶೇಕಡ 50 ಭಾಗದ ಹಣ ರಿಯಾಯಿತಿಯಾಗಿರುತ್ತದೆ. ಈ ಯೋಜನೆಯನ್ನು ಸಾಮೂಹಿಕವಾಗಿ ಅಳವಡಿಸಬೇಕಾಗಿರುವುದರಿಂದ ಸ್ವಸಹಾಯ ಸಂಘಗಳು ಈ ಯೋಜನೆಯನ್ನು ಕೈಗೆತ್ತಿಕೊಂಡಿವೆ.

2 ವರ್ಷಗಳ ಕಾಲ ಯಶಸ್ವಿಯಾಗಿ ನಡೆದ ಸ್ವಸಹಾಯ ಗುಂಪುಗಳನ್ನು ಈ ಯೋಜನೆಯಲ್ಲಿ ಅಳವಡಿಸಲಾಯಿತು. ಹೀಗಾಗಿ ಹಂದಿ ಸಾಕಣೆ, ಕುರಿ ಸಾಕಣೆ ಹಾಗೂ ಇಲಾಯಿತಿ ಹಸುಗಳ ಸಾಕಣೆ ಸಾಮೂಹಿಕವಾಗಿ ನಡೆಯುತ್ತಿದೆ. ಈ ಪ್ರಾಣಿಗಳ ಸಾಕಣೆಗೆ ಬೇಕಾದ ಶೆಡ್ಡನ್ನು ಇವರೇ ಕಟ್ಟಿಸಿಕೊಂಡಿದ್ದಾರೆ. ಈ ಶೆಡ್ಡುಗಳ ಮೇಲೆ 'ನವಸಾಕ್ಷರರ ಅಭಿವೃದ್ಧಿ ಸಂಘ' ಎನ್ನುವ ಹೆಸರು ರಾರಾಜಿಸುತ್ತಿದೆ. ಇವರು ಆರ್ಥಿಕವಾಗಿ ಸಬಲರಾಗಿದ್ದು ಇತರರ ಕಷ್ಟ ಸುಖದ ಬಗ್ಗೆ ಸಹಕರಿಸುತ್ತಾರೆ.

ನವಸಾಕ್ಷರರ ಅಭಿವೃದ್ಧಿ ಸಂಘಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದುದನ್ನು ಗಮನಿಸಿ ಬ್ಯಾಂಕ್ ಅಧಿಕಾರಿಗಳು ಈಗ ಹಲವಾರು ಸಂಘಗಳಿಗೆ ಸಾಲ ಕೊಡಲು ಮುಂದಾಗಿದ್ದಾರೆ. ಹೀಗೆ ಆರ್ಥಿಕವಾಗಿ ಸಬಲವಾದ ಮಹಿಳಾ ಗುಂಪುಗಳು ಸಾಮಾಜಿಕ ಸ್ವಾಸ್ಥ್ಯ ಕಾಪಾಡಲು ಸಹ ಮುಂದಾಗಿದ್ದಾರೆ.

**ಸ್ವಾಭಿಮಾನ ಕಾಪಾಡುವುದಕ್ಕೆ ಸಾಕ್ಷರತೆ**

ಪ್ರತಿ ಮಹಿಳಾ ಸ್ವ ಸಹಾಯ ಸಂಘಗಳ ಸದಸ್ಯರುಗಳಿಗೆ ಸಾಕ್ಷರೋತ್ತರ ಪಠ್ಯಪುಸ್ತಕ ಓದುವಂತೆ ಪ್ರೋತ್ಸಾಹಿಸಲಾಗುತ್ತಿದೆ. ಸ್ವಾಭಿಮಾನ ಕಾಪಾಡುವುದಕ್ಕೆ ಸಾಕ್ಷರತೆ ಬೇಕು, ಸಬಲೀಕರಣಕ್ಕೆ ಸಾಕ್ಷರತೆ ಪ್ರಮುಖ ಹೆಜ್ಜೆ ಎಂಬ ಅರಿವನ್ನು ಮೂಡಿಸಲಾಗುತ್ತಿದೆ.

ಪ್ರತಿ ಸಂಘದಲ್ಲೂ ವರ್ಷ ಪೂರ್ತಿ ಮಾಡಬೇಕಾದ ಕಾರ್ಯಕ್ರಮಗಳನ್ನು ಯೋಜಿಸಲಾಗಿದೆ. ಆ ಕಾರ್ಯಕ್ರಮಗಳೆಂದರೆ ರಾಷ್ಟ್ರೀಯ ಹಬ್ಬಗಳ ಆಚರಣೆ, ಸಾಂಸ್ಕೃತಿಕ ಚಟುವಟಿಕೆಗಳು, ಸರ್ಕಾರಿ ಅಭಿವೃದ್ಧಿ ಕಾರ್ಯಗಳ ಅನುಷ್ಠಾನ, ಶ್ರಮದಾನ ಇತ್ಯಾದಿ. ಕಾರ್ಯಕ್ರಮಗಳು, ವೀಕ್ಷಣೆಗೆ ಪ್ರವಾಸ ಹೋಗುವುದು ಮುಂತಾದವು ಸಹ ಆಗುತ್ತಿದೆ.

ಜಿಲ್ಲಾ ಸಾಕ್ಷರತಾ ಸಮಿತಿಯಿಂದ ಸಾಕ್ಷರೋತ್ತರ ಕಾರ್ಯಕ್ರಮಗಳು ಸ್ಥಗಿತವಾಗಿದ್ದರೂ ಕೂಡ ನವಸಾಕ್ಷರರ ಸಂಘಗಳು ಸಾಕ್ಷರತೆಯ ಚಟುವಟಿಕೆಯನ್ನು ಮುಂದುವರಿಸಿ ಕ್ರಿಯಾತ್ಮಕವಾಗಿ ತಮ್ಮನ್ನೇ ತಾವು ತೊಡಗಿಸಿಕೊಂಡಿದ್ದು ಒಂದು ವಿಶೇಷ.

ಎಲ್ಲಾ ಜನಗಳಿಗೂ ಸಾಕ್ಷರೋತ್ತರ ಕಾರ್ಯಕ್ರಮದ ನಂತರ ರಾಜ್ಯದ ಬಹುತೇಕ ಮುಂದುವರಿಕೆ ಶಿಕ್ಷಣದ ಯೋಜನೆಯು ಜಾರಿಗೆ ಬಂದಿದ್ದರೂ ಹಾಸನ ಜಿಲ್ಲೆಯಲ್ಲಿ ಈ ಕಾರ್ಯಕ್ರಮ ಇನ್ನೂ ಜಾರಿಯಾಗಿಲ್ಲ. ಸರ್ಕಾರವು ಮುಂದುವರಿಕೆ ಶಿಕ್ಷಣ ಯೋಜನೆಯನ್ನು ಜಾರಿ ಮಾಡದಿದ್ದರೂ ಕೂಡ ಈ ಯೋಜನೆಯಿಂದ ಮಾಡಬಹುದಾದ ಎಲ್ಲಾ ಚಟುವಟಿಕೆಯನ್ನು 1600 ನವಸಾಕ್ಷರ ಸಂಘಗಳು 130000 ಮಹಿಳೆಯರು ಈಗಾಗಲೇ ಜಾರಿಗೊಳಿಸುತ್ತಿದ್ದಾರೆ.

ತಮ್ಮ ಹಳ್ಳಿಗೆ, ತಮ್ಮ ಸಮುದಾಯಕ್ಕೆ ದೊರಕಬೇಕಾದ ಹಕ್ಕುಗಳನ್ನು ಜಾರಿಗೊಳಿಸುವಂತೆ ಜಿಲ್ಲಾಧಿಕಾರಿಗಳಿಗೆ ಪ್ರತಿಯೊಬ್ಬರು ಪತ್ರ ಬರೆಯುತ್ತಾರೆ. ಯಾವುದಾದರು ಒಂದು ವಿಷಯಕ್ಕೆ ಸಂಬಂಧಪಟ್ಟಂತೆ ಬೇಡಿಕೆಗಳನ್ನು ಇಡುವುದು ಎಂದರೆ ಜಿಲ್ಲಾಧಿಕಾರಿಗಳ ಹೆಸರಿಗೆ ನವಸಾಕ್ಷರರು ಬರೆದ ನೂರಾರು ಅಂಚೆಕಾರ್ಡುಗಳು ಜಿಲ್ಲಾಧಿಕಾರಿಯವರಿಗೆ ತಲುಪಿರುತ್ತವೆ. ನೂರಾರು ಜನರಿಂದ ಬಂದ ಇಂತಹ ಪತ್ರಗಳ ಕುರಿತು

ಅವರು ಅಸಡ್ಡೆ ಮಾಡುವಂತಿಲ್ಲ. ಜಿಲ್ಲಾಧಿಕಾರಿಗಳು ನವಸಾಕ್ಷರರ ಬೇಡಿಕೆಗಳಿಗೆ ಮಣಿಯಲೇ ಬೇಕಾಗುತ್ತದೆ.

ಹಾಸನ ಜಿಲ್ಲೆಯಾದ್ಯಂತ ಒಂದೇ ಸುದ್ದಿ, ಸಾಕ್ಷರತೆಯು ಸ್ವಾಭಿಮಾನ ಕಾಪಾಡಲು ಒಂದು ಪ್ರಬಲವಾದ ಶಕ್ತಿಯಾಗಿದೆ ಎನ್ನುವುದು. ಅಧಿಕಾರಿಗಳಿಗೆ, ಜನಪರ ಸಂಘಟನೆಗಳಿಗೆ, ಜನಪ್ರತಿನಿಧಿಗಳಿಗೆ ಇಂತಹ ಒಂದು ಬದಲಾವಣೆ ಆಶ್ಚರ್ಯ ಮೂಡಿಸಿದೆ.

ನವಸಾಕ್ಷರ ಮಹಿಳೆಯರನ್ನು ಭೇಟಿಯಾಗಿ "ಸರ್ಕಾರದಿಂದ ನಿಮಗೆ ಇನ್ನೂ ಮುಂದುವರಿಕೆ ಶಿಕ್ಷಣ ಕೇಂದ್ರಗಳು ಜಾರಿ ಆಗಿಲ್ಲವಲ್ಲ. ನೀವು ಏನು ಮಾಡುತ್ತೀರಿ?" ಎಂದು ಕೇಳಿದ ಪ್ರಶ್ನೆಗೆ "ಈ ಯೋಜನೆಗೆ ಸರ್ಕಾರ ಕೊಡುವುದು ಒಂದೆರಡು ಕೋಟಿ ರೂಪಾಯಿಗಳು ಮಾತ್ರ. ಅಕಸ್ಮಾತ್ ಸರ್ಕಾರ ಈ ಯೋಜನೆಗೆ ಹಣ ಕೊಡುವುದು ತಡವಾದರೆ ನಾವೇ ಮುಂದುವರಿಕೆ ಶಿಕ್ಷಣ ಕೇಂದ್ರಗಳನ್ನು ತೆರೆಯುತ್ತೇವೆ. ಈಗ ನಮ್ಮ ಬಳಿ ಇದೇ ಉದ್ದೇಶಕ್ಕೆ ಒಂಬತ್ತು ಕೋಟಿ ರೂಪಾಯಿಗಳನ್ನು ಇಟ್ಟಿದ್ದೇವೆ" ಎಂದು ಅವರು ಹೇಳಿದಾಗ ಮೂಗಿನಮೇಲೆ ಬೆರಳಿಟ್ಟು ಆಶ್ಚರ್ಯ ಪಡುವಂತೆ ಆಗುತ್ತದೆ. ಅಸಾಧ್ಯ ಆದರೂ ಇದು ನಿಜ.

ಇಷ್ಟೆಲ್ಲಾ ಸಾಧನೆಗಳ ನಡುವೆಯೂ ಹಲವಾರು ಎಡರು ತೊಡರುಗಳೂ ಉಂಟಾಗಿವೆ. ಅವುಗಳೆಂದರೆ ಸರ್ಕಾರ ಸ್ಥಾಪಿಸಿದ ಸ್ತ್ರೀ ಶಕ್ತಿ ಸಂಘಗಳು. ಈ ಸ್ತ್ರೀ ಶಕ್ತಿ ಸಂಘಗಳಿಗೆ ಸರ್ಕಾರವು 5000 ರೂಪಾಯಿಗಳ ಸಹಾಯ ಧನವನ್ನು ನೀಡುತ್ತಿದೆ. ಆದರೆ ನೀವು ಒಂದು ಕಾಸನ್ನು ಸಹ ನಮ್ಮ ಸಂಘಗಳಿಗೆ ಕೊಟ್ಟಿಲ್ಲ ಎನ್ನುವ ಅಪಸ್ವರ ಹೊರಡಲು ಪ್ರಾರಂಭವಾಯಿತು.

**ಹಣ ಪಡೆದ ಸ್ತ್ರೀ ಶಕ್ತಿ ಉಳಿತಾಯ ಸಂಘಗಳು ಸಾಧಿಸಿರುವುದಕ್ಕಿಂತ ನೂರು ಪಟ್ಟು ಹೆಚ್ಚಿನ ಕೆಲಸಗಳನ್ನು ಹಣ ಸಹಾಯ ಪಡೆಯದೆಯೂ ನವಸಾಕ್ಷರರ ಸಂಘಗಳು ಮಾಡಿರುವುದು ಮಹತ್ತರವಾದದ್ದು** ಎಂಬುದನ್ನು ಜಿಲ್ಲಾ ಸಾಕ್ಷರತಾ ಸಮಿತಿಯ ವತಿಯಿಂದ ಮನದಟ್ಟು ಮಾಡಲಾಯಿತು.

ನವಸಾಕ್ಷರರ ಸಾಧನೆಗಳನ್ನು ಹೇಳುತ್ತಾ ಹೋದರೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಕೊನೆಯದಾಗಿ ಅವರು ಸಾಧಿಸಿದ ಇನ್ನೊಂದು ವಿಷಯ ಹೇಳಲೇಬೇಕು. ಅದೆಂದರೆ, ಹಾಸನ ಜಿಲ್ಲೆಯಲ್ಲಿರುವ 2400 ಹಳ್ಳಿಗಳ ಬಾಲಕಾರ್ಮಿಕ ಸಮೀಕ್ಷೆಯನ್ನು ನವಸಾಕ್ಷರರ ಅಭಿವೃದ್ಧಿ ಸಂಘದ ವತಿಯಿಂದ ನಡೆಸಲಾಯಿತು. ಕಾರ್ಮಿಕ ಇಲಾಖೆಯ ಸಹಾಯ ಪಡೆದು ಈಗ ಬಾಲಕಾರ್ಮಿಕರನ್ನು ವಿಮುಕ್ತಿಗೊಳಿಸಿ 'ಮಹಾತ್ಮ ಗಾಂಧಿ ಬಾಲಕಾರ್ಮಿಕ ವಸತಿ ಶಾಲೆ'ಯನ್ನು ಸಂಘದಿಂದ ನಡೆಸಿಕೊಂಡು ಹೋಗುತ್ತಿದ್ದಾರೆ. ನವಸಾಕ್ಷರರ ಅಭಿವೃದ್ಧಿ ಸಂಘಗಳ ಈ ಸಾಧನೆ ಇತರರಿಗೆ ದಾರಿದೀಪ, ಶ್ಲಾಘನೀಯ ಮತ್ತು ಅನುಕರಣೀಯ. □

## ನಾ ತೊಗಲು ಗೊಂಬೆಯಲ್ಲ

ಜನ್ಮಕೊಟ್ಟ ತಾಯೆ ಹೇಳು
ಕೊಟ್ಟದ್ದು ನೀ ಬರಿ ದೇಹವೇನು?
ಹೆಣ್ಣು ಹುಟ್ಟಿತೆಂದು ಹಾ ಎಂದಿಯೇನು?
ಹುಟ್ಟಿತ್ತ ಪರಧನವೆಂದಿಯೇನು?

ಜಗಕೆ ಕರೆದ ತಂದೆ ಹೇಳು
ವಿವಾಹದಿಂದಲೆ ಸದ್ಗತಿ ಅಂದಿಯೇನು?
ಹೆರುವುದೇ ನನ್ನ ಧರ್ಮವೇನು?
ಪತಿಯೇ ಪರದೈವವೇನು?

ಏಕೆ ಮರುಳಾಗುವನು ಹುಡುಗಾ?
ಅಂಗಾಂಗದಲ್ಲಿ ತನ್ನ ಕಣ್ಣ ನೆಡುವಾ,
ಮೈಗಂಧಕೆ ಸುತ್ತಿಸುಳಿವ ಭೃಂಗಾ
ಕಾಮದ ಪುತ್ಥಳಿಯೇ ನಾನು?



ಚಿತ್ರದಲ್ಲಿ, ವ್ಯಾಪಾರಿ ಛತ್ರದಲ್ಲಿ
ಬಾರಿನಲ್ಲಿ, ಕಾಮುಕರ ಕೇರಿಗಳಲ್ಲಿ,
ಬಡತನದಲ್ಲಿ ಸಿರಿತನದಲ್ಲಿ
ಸಂತೆಯಲ್ಲಿಟ್ಟ ಸರಕೇ ನಾನು?

ಕಾಯ ಕಠಿನೆ ಕಂದಿದರೇನು!
ದೇಹ ಮಿಠನೆ ಮಿಂಚಿದರೇನು!
ಆತ್ಮಸಂಗಾತದ ಅಕ್ಕನಿರವು
ಜಗದ ಕಣ್ಣು ತೆರೆಯಿತೇನು?

ದೇಹ ಮೀರಿ ಬೆಳೆದರೇನು?
ಬಾಳು ಎಷ್ಟು ಹೊಳೆದರೇನು?
ಯಾವ ಕಣ್ಣು ಮಿಂಚಲಿಲ್ಲ,
ಯಾವ ತಲೆದೂಗಲಿಲ್ಲ.

ಚೆಲ್ಲಿ ಬಾಳಲೆ ಹೆಣ್ಣುತನವ
ಆತ್ಮ ಪ್ರತ್ಯಯದ ಬದುಕ?!
ಜಗದ ಸಂಚಿನ ವ್ಯೂಹದಲ್ಲಿ
ತೊಗಲು ಗೊಂಬೆಯಾಗಲಾರೆ.

ಗೊಂಬೆಯಲ್ಲ, ನಿಮ್ಮ ಗಿಡದ ಕೊಂಬೆಯಲ್ಲ,
ಜನ್ಮಿಸಿರುವುದೇ ಜಗದಾಂಬೆ ಎಂದು!
ಏಳು ಜನ್ಮಕೂ ಹೆಣ್ಣಾಗಿ ಬರುವೆ
ನಿತ್ಯಕೆ ಅರಿವು ಕಣ್ಣ ತೆರೆವೆ!!

***ಮಾಲತಿ ಪಟ್ಟಣಶೆಟ್ಟಿ***



# ಸಾರ್ವಜನಿಕ ವಿಚಾರಣೆ

**ಪೊಲೀಸ್ ಹಿಂಸೆಯ ವಿರುದ್ಧ ಲೈಂಗಿಕ ಕಾರ್ಯಕರ್ತೆಯರ ಹೋರಾಟ**

ಆಕೆಯ ಹೆಸರು ರಮಾ. 1991ನೇ ಇಸವಿಯಲ್ಲಿ ಕೇವಲ 500ರೂಗಳಿಗೆ ಆಕೆಯನ್ನು ಮಾರಿದ್ದರು. ಬದುಕೋದಕ್ಕೆ ಬೇರೆ ಯಾವುದೂ ದಾರಿ ಇರ್ಲಿಲ್ಲ. ಆಕೆ ಅನಿವಾರ್ಯವಾಗಿ ಲೈಂಗಿಕ ಕಾರ್ಯಕರ್ತೆಯಾದಳು.

ಶಬಾನಾಗೆ ನಾಲ್ಕು ಜನ ಮಕ್ಕಳು ಗಂಡನಿಗೆ ಜಾಂಡೀಸ್ ಆಗಿತ್ತು. ಕಿತ್ತು ತಿನ್ನೋ ಬಡತನ. ಗಂಡನ ಚಿಕಿತ್ಸೆಗೆ ಎರಡೂವರೆಲಕ್ಷ ಖರ್ಚಾಯಿತು. ಈಕೆಗೆ ವೈದ್ಯಕೀಯ ವೆಚ್ಚ ಭರಿಸಲು ಬೇರೆ ದಾರಿ ಇರಲ್ಲಿಲ್ಲ, ಈ ವೃತ್ತಿಗಿಳಿಯುವುದು ಅನಿವಾರ್ಯವಾಯಿತು.

ದಿನಾಂಕ : 10-01-2009ರಂದು 'ಸಾಧನ' ಸಂಘಟನೆಯ ಮೂರನೇ ವಾರ್ಷಿಕೋತ್ಸವ. ಸಾಧನ ಬೀದಿಬದಿಯ ಲೈಂಗಿಕ ಕಾರ್ಯಕರ್ತೆಯರ ಸಂಘಟನೆ. ಪ್ರತಿವರ್ಷ ಜನವರಿ ತಿಂಗಳಿನಲ್ಲಿ ಈ ಕಾರ್ಯಕರ್ತೆಯರು ವಾರ್ಷಿಕೋತ್ಸವವನ್ನು ಆಚರಿಸುತ್ತಾರೆ. ಈ ಸಂದರ್ಭದಲ್ಲಿ ತಾವೇ ತಮ್ಮ ಸಂಘಟನೆಯ ವಾರ್ಷಿಕ ವರದಿಯನ್ನು ಮಂಡಿಸುವುದ ರೊಂದಿಗೆ ತಮ್ಮ ಆರೋಗ್ಯ, ಉಳಿತಾಯ, ತಮ್ಮ ವೃತ್ತಿಯಲ್ಲಿನ ಸಮಸ್ಯೆಗಳನ್ನು ಚರ್ಚಿಸುತ್ತಾರೆ. ತಮ್ಮ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಹೋರಾಟ ನಡೆಸುವ ತೀರ್ಮಾನ ತೆಗೆದುಕೊಳ್ಳುತ್ತಾರೆ. ಈ ವಾರ್ಷಿಕೋತ್ಸವದಲ್ಲಿ ಲೈಂಗಿಕ ಕಾರ್ಯಕರ್ತೆಯರು ಪೊಲೀಸರಿಂದ ಎದುರಿಸುತ್ತಿರುವ ಕಿರುಕುಳ ಹಾಗೂ ದೌರ್ಜನ್ಯವನ್ನು ಕುರಿತು ಸಾರ್ವಜನಿಕ ವಿಚಾರಣೆ ಏರ್ಪಡಿಸಿದ್ದರು. ಸುಮಾರು 60ರಿಂದ 70 ಜನ ಲೈಂಗಿಕ ಕಾರ್ಯಕರ್ತೆಯರು ಭಾಗವಹಿಸಿದ್ದ ಈ ಕಾರ್ಯಕ್ರಮದಲ್ಲಿ ಕೆಲವು ಮಹಿಳೆಯರು ತಾವು ಪೊಲೀಸರಿಂದ ಅನುಭವಿಸುತ್ತಿರುವ ಹಿಂಸೆ, ಅವಮಾನ, ದೌರ್ಜನ್ಯವನ್ನು ಕುರಿತು ಮುಕ್ತವಾಗಿ ಮಾತನಾಡಿದರು. ಮಾತನಾಡುತ್ತಾ, ಮಾತನಾಡುತ್ತಾ ತಮ್ಮ ಆಕ್ರೋಶ, ಸಿಟ್ಟು, ಹತಾಶೆಯನ್ನು ಹಂಚಿಕೊಂಡರು. ಮಾತಿನ ನಡುವೆ ಉಮ್ಮಳಿಸಿ ಬರುವ ದುಃಖ ಹಾಗೂ ಕಣ್ಣೀರಿನಿಂದ ಮೌನವಾದರು. ಆದರೆ ಮಾತು ಗಂಟಲಲ್ಲಿ ಉಳಿಯಲಿಲ್ಲ, ಮತ್ತೆ ಮುಂದುವರಿಸಿದರು. ತಮ್ಮ ಸಮಸ್ಯೆಗೆ ಪರಿಹಾರವನ್ನು ಹುಡುಕಲು ಸಾಧ್ಯವೆ? ಎಂಬ ಪ್ರಶ್ನೆಯನ್ನು ಸಭಿಕರಿಗೆ ಹಾಗೂ ವೇದಿಕೆಯಲ್ಲಿ ಕುಳಿತಿದ್ದ ಅತಿಥಿಗಳಿಗೆ ಕೇಳಿದರು.

ತನ್ನ ಬದುಕಿನ ಬಗ್ಗೆ ಮಾತನಾಡಿದ ಜಮೀಲಾ ಅವರು "ಬಹಳಷ್ಟು ಜನ ಪೊಲೀಸರು ತಿನ್ನೋಕೆ, ಕುಡಿಯೋಕೆ, ಶೋಕಿ ಮಾಡಲು ನಾವು ಈ ವೃತ್ತಿಗೆ ಬಂದಿದ್ದೇವೆಂದು ಭಾವಿಸಿದ್ದಾರೆ. ಆದರೆ ನಾನು ಚಟಕ್ಕಾಗಿ ಆಗಲಿ, ಕೇವಲ ದುಡ್ಡು ಮಾಡಲು ಈ ದಂಧೆಗೆ ಬಂದಿಲ್ಲ. ನನ್ನ ಮಕ್ಕಳ ಭವಿಷ್ಯಕ್ಕಾಗಿ ನಾನು ಈ ವೃತ್ತಿಗೆ ಬರುವುದು ಅನಿವಾರ್ಯವಾಯಿತು. ನನಗೆ ತಂದೆ-ತಾಯಿ ಯಾರೂ ಇಲ್ಲ. ಕಟ್ಟಿಕೊಂಡವನೂ ಇಲ್ಲ; ಇಟ್ಟುಕೊಂಡವನೂ ಇಲ್ಲ. ಪೊಲೀಸರು ನಮ್ಮನ್ನು ತುಂಬಾ ಕೀಳು ದೃಷ್ಟಿಯಿಂದ ನೋಡುತ್ತಾರೆ. ನಮ್ಮ ಮಕ್ಕಳೆದುರಲ್ಲೇ ನಮ್ಮನ್ನು ಅವಮಾನಿಸುತ್ತಾರೆ. ನಾವೂ ಮನುಷ್ಯರಲ್ಲವೇ? ಹೆಂಗಸರಲ್ಲವೇ? ನಮಗೂ ಮಾನವೀಯ ಹಕ್ಕುಗಳಿಲ್ಲವಾ? ನಾನು ಕೇಸನ್ನು contest ಮಾಡುತ್ತೇನೆ. ಸಾಮಾನ್ಯವಾಗಿ 4.30 ಅಥವಾ 5ರ ಸಮಯದಲ್ಲಿ ನಮ್ಮನ್ನು ನ್ಯಾಯಾಲಯದಲ್ಲಿ ಹಾಜರು ಪಡಿಸುತ್ತಾರೆ. ಆಗ ಜಾಮೀನು ಪಡೆಯುವುದು ಕಷ್ಟವಾಗುತ್ತದೆ. ನಮ್ಮ ಬಳಿ ಸರಿಯಾದ ದಾಖಲೆಗಳಿರುವುದಿಲ್ಲ. ನಮ್ಮನ್ನು ಜೈಲಿಗೆ ಕಳಿಸುತ್ತಾರೆ. ನಾವು ಎರಡು ಮೂರುದಿನ ಮನೆಗೆ ಹೋಗದಿದ್ದರೆ ನಮ್ಮ ಮಕ್ಕಳ ಪಾಡೇನು? ನಾವು ನೆರೆಹೊರೆಯವರಲ್ಲಿ ನಿಜ ಹೇಳಿ ಬದುಕಲು ಸಾಧ್ಯವಿಲ್ಲ. ನಿಜ ಹೇಳಿದರೆ ನಮಗೆ ಮನೆ ಯಾರು ಕೊಡುತ್ತಾರೆ? ಇಂತಹ ಸ್ಥಿತಿಯಲ್ಲಿ ನಾವು ಬದುಕುವುದು ಹೇಗೆ? ಇದಕ್ಕೆ ನೀವು ಯರಾದರೂ ಉತ್ತರ ಕೊಡುತ್ತೀರಾ?" ಎಂದರು.

ಅನಂತರ ಮಾತನಾಡಿದ ಕಮಲಾ "ಪೊಲೀಸರು ನೀಡುವ ಹಿಂಸೆಯ ವಿವರವನ್ನು ಅಂತರಾಳದಲ್ಲಿ ಹುದುಗಿದ್ದ ಸಿಟ್ಟಿನಿಂದ ವ್ಯಕ್ತಪಡಿಸಿದರು "ನಮ್ಮಂಥ ಹೆಣ್ಣುಮಕ್ಕಳ ಮೇಲೆ ಪೊಲೀಸರಿಂದ ನಡೆಯುತ್ತಿರುವ ಹಿಂಸೆಯನ್ನು ಬುಡ ಸಹಿತ ಕಿತ್ತು ಹಾಕಬೇಕು. ನಮ್ಮ ಪರಿಸ್ಥಿತಿಗೆ ಯಾರು ಕಾರಣ? ಈ ವೃತ್ತಿಯಲ್ಲಿ ಬೇಕಾದಷ್ಟು ಜನ ಗಂಡಸರು ಮಧ್ಯವರ್ತಿಗಳಿದ್ದಾರೆ. ಅವರಿಂದ ಲಂಚ ತೆಗೆದುಕೊಂಡು ನಮಗೆ ಪೊಲೀಸರು ಹಿಂಸೆ ನೀಡುತ್ತಾರೆ. ಇಷ್ಟೊಂದು ಸಂಖ್ಯೆಯಲ್ಲಿ ಹೆಣ್ಣುಮಕ್ಕಳು ಈ ವೃತ್ತಿಗಿಳಿಯಲು ಕಾರಣವೇನು? ಸ್ಟೇಷನ್‌ಗೆ ನಮ್ಮನ್ನು ಕರೆತಂದಾಗ ಪೊಲೀಸರು ಅಶ್ಲೀಲವಾಗಿ ಮಾತನಾಡುತ್ತಾರೆ. ಮಾಂಗಲ್ಯ, ಬಳೆ, ಎಲ್ಲ ತೆಗೀರಿ ಎಂದು ಹೆದರಿಸುತ್ತಾರೆ. ಸಮಯ ಮೀರಿದರೆ ರಿಮ್ಯಾಂಡ್ ಹೋಂನಲ್ಲಿ ಇಡುತ್ತಾರೆ. ನಾವು ಎರಡು ಮೂರು ದಿನ ಮನೆಯಿಂದ ಹೊರಗೆ ಇದ್ದರೆ ನಮ್ಮ ಮಕ್ಕಳ ಗತಿಯೇನು? ನಮಗೆ ರೌಡಿಗಳಿಂದ ತೊಂದರೆಯಾದರೆ ಅಥವಾ ಕಳ್ಳತನವಾದರೆ, ನಾವು ದೂರು ನೀಡಿದರೂ ತೆಗೆದುಕೊಳ್ಳುವುದಿಲ್ಲ. ಒಂದು

### ಸಾಧನ ವಾರ್ಷಿಕೋತ್ಸವದಲ್ಲಿ ಮೂಡಿಬಂದ ಬೇಡಿಕೆಗಳು

1. ಪೊಲೀಸರು ಅಶ್ಲೀಲವಾಗಿ ಬೈಯುವುದನ್ನು ತಡೆಯಬೇಕು
2. ಅಮಾನುಷವಾಗಿ ಹಿಂಸಿಸುವುದು, ಹೊಡೆಯುವುದು ನಿಲ್ಲಬೇಕು.
3. ಪೊಲೀಸರು ಫ್ರೀಸೆಕ್ಸ್‌ಗೆ ಒತ್ತಾಯಿಸುವುದನ್ನು ನಿಲ್ಲಿಸಬೇಕು.
4. ಕಳ್ಳತನ, ಅಥವಾ ಇನ್ನಾವುದೇ ವಿಚಾರದಲ್ಲಿ ದೂರು ನೀಡಿದಾಗ ಸ್ವೀಕರಿಸಬೇಕು.
5. ದಂಡ ಕಟ್ಟಿದಾಗ ಅದಕ್ಕೆ ರಸೀದಿ ನೀಡಬೇಕು.

ಸ್ಟೇಷನ್‌ನಲ್ಲಿ ಒಂದು ವರ್ಷ ಒಬ್ಬ ಇನ್ಸ್‌ಪೆಕ್ಟರ್ ಇದ್ರೆ, ಮುಂದಿನ ವರ್ಷ ಬೇರೆಯವರು ಬರುತ್ತಾರೆ. ಹೊಸದಾಗಿ ಬಂದವರು ಹೊಸ ವರಸೆ ಶುರುಮಾಡ್ತಾರೆ. ಎಲ್ಲರಿಗೂ ಮಾಮೂಲಿ ನೀಡಿ, ಮನೆಗೆ ಹೋಗುವಾಗ ನಮ್ಮ ಕೈಯಲ್ಲಿ 100ರೂ ಸಹ ಉಳಿಯೋಲ್ಲ." ಎನ್ನುತ್ತಾರೆ. ಉಮ್ಮಳಿಸಿ ಬರುವ ದುಃಖದಲ್ಲಿ ಧ್ವನಿ ಅದುರುತ್ತದೆ. ಆದರೂ ಆಕೆ ನಿಲ್ಲಿಸದೆ ಮುಂದುವರಿಸುತ್ತಾ "ನೀವು ಬೀದಿಗೆ ಬರಬೇಡಿ ಎಂದು ನಮ್ಮನ್ನು ಅಟ್ಟಿಸಿಕೊಂಡು ಬರ್‍ತಾರೆ. ನಾವು ಯಾವ ಕಡೆ ಓಡ್ಬೇಕು? ನಮಗೆ ದಾರಿ ಎಲ್ಲಿದೆ? ನಾವೇನು ಕೊಲೆ ಮಾಡಿದ್ದೇವೆಯೇ? ಕಳ್ಳತನ ಮಾಡಿದ್ದೇವೆಯೇ? ನಾನು ಎರಡು ಮಕ್ಕಳನ್ನು ಸಾಕ್ಬೇಕು. ನನ್ನ ಮೈಯನ್ನು ನಾನು ಮಾರಿಕೊಳ್ತೀನಿ. ಪೊಲೀಸ್ರು ದೊಡ್ಡ ದೊಡ್ಡ ಕಳ್ಳರನ್ನ, ಕ್ರಿಮಿನಲ್ಸ್‌ನ ಬಿಟ್ಟುಬಿಡ್ತಾರೆ. ನಮ್ಮಂತಹ ಬಡಮಹಿಳೆಯರನ್ನು ಹಿಡಿದು ಹಿಂಸಿಸುತ್ತಾರೆ. ನಾನು ಎರಡು ಸಲ ಜೈಲಿಗೆ ಹೋಗಿ ಬಂದಿದ್ದೇನೆ. ನಾನು ಜೈಲಿಗೆ ಹೋದಾಗ ನನ್ನ ಮಕ್ಕಳನ್ನು ಯಾರು ನೋಡಿಕೋಳ್ತಾರೆ? ನೆರೆಹೊರೆಯವರಿಗೆ ಏನು ಉತ್ತರ ಕೊಡಬೇಕು? ನಮಗೂ ಬದುಕುವ ಹಕ್ಕು ಇಲ್ಲವೆ? ನೀವೇ ಹೇಳಿ" ಎಂದು ಸಭಿಕರನ್ನು ನೇರವಾಗಿ ಕೇಳಿದರು.

"ನಮ್ಮನ್ನು ಹೊಡೆಯಲು, ಅಶ್ಲೀಲವಾಗಿ ಬೈಯಲು ಏನಾದ್ರು ಕಾನೂನಿದೆಯಾ? ಯಾರು ಪೊಲೀಸರಿಗೆ ಈ ಅಧಿಕಾರವನ್ನು ನೀಡಿದವರು?" ಎಂದು ಪ್ರಶ್ನಿಸಿದ ಸರೋಜ ರಸ್ತೆ ಬದಿಯಲ್ಲಿ ವಾಸಿಸುತ್ತಾಳೆ. ಆಕೆ ತುಂಬು ಗರ್ಭಿಣಿ ಬೇರೆ. "ಪೊಲೀಸರು ಅಶ್ಲೀಲವಾಗಿ ನಮ್ಮನ್ನು ಬೈಯುತ್ತಾರೆ. ಅವರು ಕರೆದಾಗ ನಾವು ಫ್ರೀ ಸೆಕ್ಸ್‌ಗೆ ಒಪ್ಪಿಕೊಳ್ಳಬೇಕು. ಒಪ್ಪಿಕೊಳ್ಳದಿದ್ರೆ ಹೊಡಿಸಿಕೊಳ್ಳಬೇಕು, ಹಿಂಸೆ ಹೆಚ್ಚಾಗುತ್ತೆ. ಫ್ರೀ ಸೆಕ್ಸ್‌ಗೆ ಒಪ್ಪಿಕೊಳ್ಳಬೇಕೆಂದು ಕಾನೂನಿದೆಯಾ?" ಸರೋಜ ಹೀಗೆ ಒಂದಾದ ಮೇಲೊಂದು ಪ್ರಶ್ನೆ ಕೇಳಿದರು.

– ಸಾರ್ವಜನಿಕ ವಿಚಾರಣೆಯಲ್ಲಿ ಭಾಗವಹಿಸಿದ್ದ ಮಾನಸದ ರಾಜೇಶ್ವರಿಯವರು "ಮಹಿಳೆಯರ ಮೇಲೆ ನಡೆಯುವ ಹಿಂಸೆಯು, ಎಲ್ಲಾ ವರ್ಗದ, ಜಾತಿಯ ಮಹಿಳೆಯರ ಮೇಲೂ ನಾಲ್ಕು ಗೋಡೆಯ

# ನಾನು ದಂಧೆ ಮಾಡುವವಳು

ಹೌದು ಸ್ವಾಮಿ,
ನಾನು ದಂಧೆ ಮಾಡುವವಳು
ನಿಮ್ಮ ಮಾತಲ್ಲಿ
ಬೀದಿ ಸೂಳೆ ಎಂದುಕೊಳ್ಳಿ

ಕಟ್ಟಿಕೊಂಡವನಿಲ್ಲ
ಇಟ್ಟುಕೊಂಡವನಿಲ್ಲ
ಹೌದು ಸ್ವಾಮಿ
ನಿತ್ಯ ಸುಮಂಗಲಿ

ಬೀದಿಯಲ್ಲಿ
ಜೋಪಡಿಯಲ್ಲಿ
ಎಲ್ಲೆಂದರಲ್ಲಿ
ಹೌದು ಸ್ವಾಮಿ
ಬಯಲಲ್ಲೇ ಬೆತ್ತಲಾಗುವ
ನನಗೆ
ಶೂನ್ಯ ಲಭ್ಯವಾಗಿದೆ
ನಿಮ್ಮ ಮಾತಲ್ಲಿ
ಅಕ್ಕನ ಅಲೌಕಿಕ ಶೂನ್ಯ

ಕಿವಿ ಓಲೆಗಳು
ಕೈಯ ಬಳೆಗಳು
ಮೂಗುತಿ
ಕಿಲುಬಿಡಿದ ತಾಳಿ
ಎಲ್ಲಾ ಮಾರಿದ ಮೇಲೆ
ಮಾರಲಿಕ್ಕೆ ಏನಿತ್ತು ಸ್ವಾಮಿ
ಅದಕೇ ಮಾರಿಬಿಟ್ಟಿದ್ದೇನೆ
ಈ ಒಡಲನ್ನು
ಈ ಒಡಲಿನ ಕಡಲನ್ನು

ಮೊಲೆಯುಣ್ಣುವ ಮಗುವಿಗಾಗಿ
ಜೋತು ಬಿದ್ದ ಮೊಲೆಗಳನ್ನು
ನಿತಂಬವನ್ನು
ಪಣಕ್ಕೊಡ್ಡಿದ್ದೇನೆ



ಒಡಲೆಂಬ ರಕ್ತ-ಮಾಂಸದ
ಮುದ್ದೆಯನ್ನು
ಮಾರಾಟಕ್ಕಿಟ್ಟಿದ್ದೇನೆ ಸ್ವಾಮಿ

ಮರ್ಯಾದೆಯ
ಮಹಲಿಲ್ಲದ ಈ ದೇಹಕ್ಕೆ
ಮುಜುಗರವಿಲ್ಲ
ಮಡಿವಂತಿಕೆಯಿಲ್ಲ
ಕೈ ಕಾಲು ಆಡಿಸಿ
ಹೆಂಗೆಂದರೆ ಹಾಗೆ
ಕುಣಿಯುತ್ತೇನೆ
ಕುಡಿಯುತ್ತೇನೆ
ಎಲ್ಲದರಿಂದ ಕಳಚಿಕೊಂಡು
ವಿಮೋಚನೆ ಹೊಂದಿದ್ದೇನೆ ಸ್ವಾಮಿ

ಗಂಡನಿಲ್ಲ
ಕುಟುಂಬವಿಲ್ಲ
ಮನೆ ಇಲ್ಲ
ಬೀದಿ ಸೂಳೆ ನಾನು
ಒಡಲ ಮಗುವಿನ ಮೋಹಕ್ಕೆ
ಬಂಧಿಸಿಕೊಂಡಿದ್ದೇನೆ ಸ್ವಾಮಿ
ನನ್ನನ್ನ ಇಲ್ಲಿಗೆ
ಬಂಧಿಸಿಕೊಂಡಿದ್ದೇನೆ

ನಿಮ್ಮ
ಮಾತ್ರ ದೇವ್ರೋ ಭವದ
ಪ್ರಶಸ್ತಿ – ಪುರಸ್ಕಾರ
ಪಟ್ಟಿಯಲಿ
ನಾನೇನಾದರೂ
ಸೂಕ್ತಳೋ
ನೋಡಿ ಸ್ವಾಮಿ
ನಾನು ದಂಧೆ ಮಾಡೋಳು

■ *ಹೆಚ್.ಎಸ್. ಚಂಪಾವತಿ*

ಒಳಗೆ ನಡೆಯುತ್ತಿದೆ. ಲೈಂಗಿಕ ಕಾರ್ಯಕರ್ತೆಯರು ನಮಗಿಂತ ಬೇರೆ ಮಹಿಳೆಯರು ತುಂಬಾ ಚೆನ್ನಾಗಿದ್ದಾರೆ. ಯಾವ ತರದ ಹಿಂಸೆಯೂ ಅವರ ಮೇಲೆ ನಡೆಯುತ್ತಿಲ್ಲವೆಂದು ಭಾವಿಸಬಾರದು. ಈ ವ್ಯವಸ್ಥೆಯ ಹಿಂದೆ, ಪುರುಷ ಪ್ರಧಾನ ಸಂಸ್ಕೃತಿಯ ಹುನ್ನಾರವಿದೆ. ಹಾಗಾಗಿ ನಮ್ಮ ಸಂಘರ್ಷ ಅದರೊಡನೆ ಇರಬೇಕು ಎಂದು ಹೇಳುತ್ತಾ, ಪೊಲೀಸರಿಂದ ಲೈಂಗಿಕ ಕಾರ್ಯಕರ್ತೆಯರ ಮೇಲೆ ನಡೆಯುತ್ತಿರುವ ಹಿಂಸೆಯು ಮಾನವ ಹಕ್ಕುಗಳ ಉಲ್ಲಂಘನೆ ಹಾಗೂ ಹಿಂಸೆಯ ಸ್ವರೂಪದ್ದಾಗಿದೆ. ಅದು ಇತರ ಹಿಂಸೆಯ ಜೊತೆಗೆ ತಳುಕು ಹಾಕಿಕೊಂಡಿದೆ" ಎನ್ನುತ್ತಾ ಕೋಮುವಾದದ ಮೌಲ್ಯಗಳೊಂದಿಗೆ ಅಧಿಕಾರ ಜೊತೆಗೂಡಿದಾಗ ಹಿಂಸೆ ಹೇಗೆ ನಡೆಯಬಹುದೆಂಬುದಕ್ಕೆ ಇತ್ತೀಚಿನ ನಿದರ್ಶನಗಳನ್ನು ನೀಡಿದರು. "ಮಾನವ ಹಕ್ಕುಗಳು ಉಲ್ಲಂಘನೆಯಾದಾಗ ಸಂಘಟನೆಯೊಂದೆ ಅದಕ್ಕಿರುವ ಉತ್ತರ. 'ಮಾತೃದೇವೋಭವ' ಎನ್ನುವ ಸಂಸ್ಕೃತಿಯ ಸಂದರ್ಭದಲ್ಲಿ ನಿಜವಾದ ತಾಯಂದಿರಿಗೆ ಏನಾದರೂ ಬಹುಮಾನ, ಪ್ರಶಸ್ತಿ, ನೀಡುವುದಾದರೆ ಅದು ನಿಮಗೆ ಸಲ್ಲಬೇಕು" ಎಂದರು.

ಸಮತಾ ಸೈನಿಕ ದಳದ ವೆಂಕಟಸ್ವಾಮಿಯವರು ತಮ್ಮ ಅನಿಸಿಕೆ ಯನ್ನು ಹೇಳುತ್ತಾ "ದೇವದಾಸಿಯರು, ಹಿಜಡಾ ಹಾಗೂ ಲೈಂಗಿಕ ಕಾರ್ಯಕರ್ತೆಯರ ಹೋರಾಟಕ್ಕೆ ಸಮತಾ ಸೈನಿಕದಳ ಬೆಂಬಲ ನೀಡುತ್ತಾ ಬಂದಿದೆ"ಯೆಂದರು. ಅವರು "ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್‌ರವರು ಪಾರ್ಲಿಮೆಂಟ್‌ನಲ್ಲಿ ಮಹಿಳಾ ಹಕ್ಕುಗಳಿಗೆ ಸಂಬಂಧಪಟ್ಟ ಮಸೂದೆ ಪಾಸಾಗದೆ ಇದ್ದಾಗ ರಾಜೀನಾಮೆ ನೀಡಿ ಹೊರಬಂದರು" ಎನ್ನುತ್ತಾ "ಈ ತತ್ವದಡಿಯಲ್ಲಿ ಎಲ್ಲಾ ಜನಪರ ಹೋರಾಟಗಳಿಗೆ ನಮ್ಮ ಬೆಂಬಲವಿದೆ" ಎಂದರು. ಪೊಲೀಸ್ ದೌರ್ಜನ್ಯ ನಡೆದಾಗ ಅಲ್ಲಿಯ ಸ್ಥಳೀಯ ಸಮತಾ ಸೈನಿಕ ದಳದ ಕಛೇರಿಯವರಿಗೆ ಮಾಹಿತಿ ನೀಡಿದರೆ ತಮ್ಮ ಸಂಘಟನೆಯಿಂದ ಬೆಂಬಲ ಸಿಗುತ್ತದೆಯೆಂಬ ಭರವಸೆಯನ್ನು ಅವರು ನೀಡಿದರು. ಪಂಚತಾರ ಹೊಟೇಲ್‌ಗಳಲ್ಲಿ ಈ ವೃತ್ತಿಯ ಮಹಿಳೆಯರಿಗೆ ಸಿಗುವ ರಕ್ಷಣೆ, ಬೀದಿಯಲ್ಲಿನ ಮಹಿಳೆಯರಿಗೆ ಸಿಗುತ್ತಿಲ್ಲವೆಂದೂ, ಸಂಘಟನೆಯ ಮೂಲಕ ಈ ಹಿಂಸೆಗೆ ನೀವೇ ಪರಿಹಾರ ಕಂಡುಕೊಳ್ಳಬೇಕೆಂದೂ ತಮ್ಮ ಸಂಘಟನೆಯಿಂದ ಸಂಪೂರ್ಣ ಬೆಂಬಲವನ್ನು ನೀಡುತ್ತೇವೆಂದೂ ನುಡಿದರು.

ಪರ್ಯಾಯ ಕಾನೂನು ವೇದಿಕೆಯ ಮನೋರಂಜನಿಯವರು "ನಮ್ಮ ಸಮಾಜ ಹೆಣ್ಣುಮಕ್ಕಳನ್ನು ಲೈಂಗಿಕ ವಸ್ತುವಾಗಿ ಹಾಗೂ ಭೋಗದ ವಸ್ತುವಾಗಿ ನೋಡುತ್ತದೆ. ಇಂತಹ ಯೋಚನೆ ಬಂದಿರುವುದು 'ಮನು'ವಾದದಿಂದಾಗಿ. ನಮ್ಮ ದೇಶದಲ್ಲಿ ಜಾತಿ ಪದ್ಧತಿ ವ್ಯವಸ್ಥಿತವಾಗಿ ಬಂದಿರುವುದು ಸಹ ಈ ಸಂಸ್ಕೃತಿಯ ಪರಿಣಾಮವಾಗಿ ಎಂದು ಹೇಳುತ್ತಾ, ಮಹಿಳೆಯರನ್ನು ಅಶ್ಲೀಲವಾಗಿ ನಡೆಸಿಕೊಳ್ಳುವುದು, ದೂಷಿಸುವುದು ಈ ವೃತ್ತಿಯಲ್ಲಿರುವ ಮಹಿಳೆಯರನ್ನು ಮಾತ್ರವಲ್ಲ ಎನ್ನುತ್ತಾ, ಆದಿವಾಸಿ ಮಹಿಳೆ ಹಾಗೂ ಬನ್ವಾರಿದೇವಿಯವರ ಕಾನೂನು ಹೋರಾಟವನ್ನು ವಿವರವಾಗಿ ತಿಳಿಸಿದರು. ಈ ಹೋರಾಟದ ಪರಿಣಾಮವಾಗಿ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳವನ್ನು ವಿರೋಧಿಸುವ ಕಾನೂನು ಜಾರಿಗೆ ಬರಲು ಸಾಧ್ಯವಾಯಿತೆಂದರು. "ನಿಮಗಿರುವ ಧೈರ್ಯ, ಮಾನವೀಯ ಕಾಳಜಿಯನ್ನು ಮೆಚ್ಚಬೇಕು. ಬೀದಿಯಲ್ಲಿ ಬಿದ್ದ ಮಹಿಳೆಯರನ್ನು ಹಾಗೂ ಮಕ್ಕಳನ್ನು ನೀವು ರಕ್ಷಿಸುತ್ತೀರಾ, ಆದರೆ ನನಗೆ ಆ ಶಕ್ತಿ ಇಲ್ಲ" ಎಂದು ಹೇಳುತ್ತಾ, "ಮಹಿಳೆ ಕೇವಲ ಲೈಂಗಿಕ ವಸ್ತುವಲ್ಲ, ನಾವೂ ಮನುಷ್ಯರು" ಎಂದರು.

ಕಾರ್ಯಕ್ರಮದ ನಿರೂಪಕಿ ರಾಧ 'ಸಾಧನ'ದ ಚಟುವಟಿಕೆಯನ್ನು ವಿವರಿಸಿದರು. ಕಾರ್ಯಕರ್ತೆಯರ ಮಕ್ಕಳಿಂದ "ಹಚ್ಚೇವು ಕನ್ನಡದ ದೀಪ" ನೃತ್ಯದೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು. ಕಾರ್ಯಕರ್ತೆಯರು ತಮ್ಮ ಹಾಡು ಹಾಗೂ ನೃತ್ಯದೊಂದಿಗೆ ಸಭಿಕರನ್ನು ನಕ್ಕು ನಲಿಸಿದರು. ವಿಮೋಚನಾ ಬೆಂಬಲಿತ 'ಸಾಧನ' ಸಂಘಟನೆ ಈ ಮಹಿಳೆಯರಲ್ಲಿ ಧೈರ್ಯ, ನಂಬಿಕೆ, ವಿಶ್ವಾಸ ಹಾಗೂ ಹೋರಾಟದ ಛಲವನ್ನು ಬಿತ್ತಿ, ನೀರೆರೆದು ಪೋಷಿಸುತ್ತಿದೆ. ಲೈಂಗಿಕ ಕಾರ್ಯಕರ್ತೆಯರೇ ಕಾರ್ಯಕ್ರಮದ ಜವಾಬ್ದಾರಿಯನ್ನು ವಹಿಸಿಕೊಂಡು, ಕಾರ್ಯಕ್ರಮದ ನಿರ್ವಹಣೆ, ಸ್ವಾಗತ, ಮುಕ್ತಾಯ ಎಲ್ಲವನ್ನು ನಿರ್ವಹಿಸಿದ್ದರು. ಈ ನಾಯಕತ್ವದ ಬಗೆಗಿನ ಒಳನೋಟ ಮೆಚ್ಚಬೇಕಾದ ಸಂಗತಿಯಾಗಿತ್ತು.

*(ಮಾನಸ)*

## "ಸಾಧನ ಸಂಘಟನೆ"

*2002ರಲ್ಲಿ ಪ್ರಾರಂಭವಾದ ಸಾಧನ ಮೆಜೆಸ್ಟಿಕ್ ಹಾಗೂ ಕಲಾಸಿಪಾಳ್ಯದ ಬೀದಿ ಬದಿಯಲ್ಲಿನ ಬಹುಪಾಲು ಲೈಂಗಿಕ ಕಾರ್ಯಕರ್ತರನ್ನೊಳಗೊಂಡ ಸಂಘಟನೆ. ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆ 'ಸಾಧನ' ಸಂಘಟನೆಯ ಚಟುವಟಿಕೆಗಳಿಗೆ ನೀರೆರೆದು ಪೋಷಿಸುತ್ತಾ ಬಂದಿದೆ. ಸಾಧನ ಸಂಘಟನೆ ತನ್ನ ಆರು ವರ್ಷದ ಕ್ರಿಯಾತ್ಮಕ ಚಟುವಟಿಕೆಯ ಮೂಲಕ ಇಂದು ತಮ್ಮ ಬೇಡಿಕೆಗಳ ಸುತ್ತ ಸ್ವತಂತ್ರವಾಗಿ ಕಾರ್ಯಗಳನ್ನು ಹಮ್ಮಿಕೊಳ್ಳುವ, ಕಾರ್ಯಗತಗೊಳಿಸುವ, ಹೋರಾಡುವ ಮಟ್ಟಕ್ಕೆ ಸ್ವಾವಲಂಬಿಯಾಗಿದೆ. ಸಾಧನದ ಕಾರ್ಯಕರ್ತರು ಮಹಿಳೆಯರನ್ನು ಸಂಘಟಿಸುವುದು, ಪೊಲೀಸರಿಂದ ಲೈಂಗಿಕ ಕಾರ್ಯಕರ್ತರ ಮೇಲೆ ನಡೆಯುವ ಹಿಂಸೆಯನ್ನು ಪ್ರತಿಭಟಿಸುವುದು, ಕೋರ್ಟ್‌ನಲ್ಲಿ ಕೇಸನ್ನು ನಡೆಸುವುದು–ಕಾನೂನು ಆರೋಗ್ಯದ ಬಗ್ಗೆ ಸದಸ್ಯರಿಗೆ ಮಾಹಿತಿ ನೀಡುವುದು, ಮಕ್ಕಳ ಯೋಗಕ್ಷೇಮ, ವಿದ್ಯಾಭ್ಯಾಸ, ಬ್ಯಾಂಕ್‌ಖಾತೆ ತೆರೆಯುವುದು, ಉಳಿತಾಯ ಮಾಡುವುದು ಮುಂತಾದ ಚಟುವಟಿಕೆಗಳನ್ನು ಸಾಧನದ ಮೂಲಕ ಮಾಡುತ್ತಿದ್ದಾರೆ. ಬೀದಿ ಬದಿಯಲ್ಲಿನ ಮಹಿಳೆಯರ ಬದುಕಿಗೆ ಘನತೆಯನ್ನು ತಂದುಕೊಡುವುದು ಸಂಘಟನೆಯ ಉದ್ದೇಶ. 'ಕಾನೂನು ಪರ್ಯಾಯ ವೇದಿಕೆ'ಯು ಸಾಧನ ಸದಸ್ಯರಿಗೆ ಉಚಿತ ಕಾನೂನು ನೆರವು ನೀಡುವುದರ ಮೂಲಕ ಹಾಗೂ ಪಿ.ಯು.ಸಿ.ಎಲ್. ಅವರಿಗೆ ಅಗತ್ಯವಾದ ತರಬೇತಿಯನ್ನು ನೀಡುವುದರ ಮೂಲಕ ಅವರಲ್ಲಿ ಧೈರ್ಯ ಹಾಗೂ ಆತ್ಮವಿಶ್ವಾಸ ಮೂಡಲು ನೆರವಾಗುತ್ತಿವೆ.*




# ಹೆಣ್ಣಿನ ವಿವಿಧ ಮುಖ ಚಿತ್ರಿಸುವ ಬಿ.ಟಿ. ಜಾಹ್ನವಿಯವರ ಕಥೆಗಳು

● ಡಾ|| ಎಚ್.ಎಲ್ ಪುಷ್ಪ

ದಾವಣಗೆರೆಯ ವಾಸಿ ಬಿ.ಟಿ. ಜಾಹ್ನವಿ ನಮ್ಮ ನಡುವಿನ ವಿಭಿನ್ನ ಸಂವೇದನೆಗಳ ಕಥೆಗಾರ್ತಿ. ಪ್ರಕಟವಾಗಿರುವುದು ಎರಡೇ ಕಥಾಸಂಕಲನ ವಾದರೂ ಆ ಕಥೆಗಳು ಬರೆಯಲೇಬೇಕೆನ್ನುವ ತುರ್ತಿನಿಂದ ಹುಟ್ಟಿದವಲ್ಲ. ಒಳಗಿನ ಕಾಡುವ ತುಡಿತಗಳು ಕಥೆಯ ರೂಪವನ್ನು ಅನಿವಾರ್ಯವಾಗಿ ಪಡೆದಂತೆ ಮೊದಲ ಓದಿನಿಂದ ತೋರುತ್ತವೆ. ಯಾವುದೇ ಸಾಹಿತ್ಯ ಪ್ರಕಾರಗಳೂ ಆಯಾ ಕಾಲಘಟ್ಟದ ತುರ್ತಿಗೆ, ಅದು ಎದುರುಗೊಳ್ಳುವ ಸಮಸ್ಯೆಗಳಿಗೆ ಅನುಗುಣವಾಗಿ ಅಪ್ರಜ್ಞಾಪೂರ್ವಕ ರಚಿತಗೊಳ್ಳುತ್ತಿರುತ್ತವೆ. ಕೆಲ ಲೇಖಕರು ಈ ತುರ್ತುಗಳನ್ನು, ಸಮಸ್ಯೆಗಳನ್ನು ಜವಾಬ್ದಾರಿಯುತ ವಾಗಿ ಒಳಗೊಳ್ಳಲೇಬೇಕಾದ ಅನಿವಾರ್ಯತೆಗೆ ಒಳಗಾಗುತ್ತಾರೆ. ಈ ಅನಿವಾರ್ಯತೆಯನ್ನು ಬದ್ಧತೆಯೆಂದು ಕರೆಯ ಲಾಗುತ್ತದೆ.

ಸಮಾಜದಲ್ಲಿ ಜೀವಿಸುವ ಲೇಖಕರಿಗೆ ಭಾಷೆ ಮತ್ತು ಹೇಳುವ ಕಲೆ ವಿಶೇಷವಾಗಿ ಒದಗಿಬರುವುದರಿಂದ ಅವರ ಮೇಲೆ ಸಾಮಾಜಿಕ ಜವಾಬ್ದಾರಿ ವಿಶೇಷವಾಗಿಯೇ ಇರುತ್ತದೆ. ಲೇಖಕಿಯರ ಮೇಲೆ ಈ ಜವಾಬ್ದಾರಿ ಸಹಜವಾಗಿಯೇ ಇದ್ದು ಆಕೆ ನೋಡುವ, ಮುಖಾಮುಖಿ ಯಾಗುವ, ಜೀರ್ಣಿಸಿಕೊಳ್ಳುವ ಜಗತ್ತುಪುರುಷನಿಗಿಂತ ಯಾವಾಗಲೂ ಭಿನ್ನವಾಗಿಯೇ ಇರುತ್ತದೆ. ಸಂವೇದನೆಗಳು ಲೇಖಕರಿಂದ ಲೇಖಕರಿಗೆ ಬೇರೆಯಾಗಿಯೇ ತೋರುತ್ತವೆ. ಇಲ್ಲಿ ಲಿಂಗ, ವರ್ಗ, ವರ್ಣಪ್ರಜ್ಞೆಗಳು ಅವರ ಸಂವೇದನೆಗಳನ್ನು ರೂಪಿಸುತ್ತಿರುತ್ತವೆ. ಇದರ ಜೊತೆಯಲ್ಲಿ ಗ್ರಾಮೀಣ ಹಾಗೂ ನಗರಪ್ರಜ್ಞೆಗಳು ಪ್ರಧಾನಪಾತ್ರ ವಹಿಸುತ್ತವೆ. ಜೊತೆಯಲ್ಲಿ ಮಹಿಳೆಯು ಮತ್ತು ಪುರುಷನು ಬಳಸುವ ಭಾಷೆಯೂ ವ್ಯಕ್ತಿತ್ವಕ್ಕೆ ತಕ್ಕಂತೆ ಮಾರ್ಪಾಡುಗೊಳ್ಳುತ್ತಿರುತ್ತದೆ.

ಮಹಿಳೆಯರ ಅನುಭವದ ಜಗತ್ತನ್ನು ಹೇಳುವಲ್ಲಿ ಭಾಷೆಯು ತನ್ನ ಹಿಡಿತವನ್ನು ಸಾಧಿಸುತ್ತಿರುತ್ತದೆ. ಹೀಗಾಗಿಯೇ ಕಥೆಯ ಪ್ರಕಾರದಲ್ಲಿ ವೈದೇಹಿಯವರು ಬಳಸುವ ಭಾಷೆಗೂ ಹೆಚ್. ನಾಗವೇಣಿ ಬಳಸುವ ಭಾಷೆಗೂ ಸ್ವಾಭಾವಿಕವಾಗಿಯೇ ವ್ಯತ್ಯಾಸವಿರುತ್ತದೆ. ಈ ಎರಡೂ ಭಾಷೆಗಳಿಗಿಂತ ಕೆಳವರ್ಗದವರ ಜಗತ್ತನ್ನು ಚಿತ್ರಿಸುವ ಭಾಷೆ ಸಹಜವಾಗಿಯೇ ಬೇರೆಯಾಗುತ್ತದೆ. ಜೀವನ ವಿಧಾನ ಹಾಗೂ ಪ್ರಾದೇಶಿಕ ಭಾಷೆ ಒಬ್ಬರಿಗಿಂತ ಒಬ್ಬರಿಗೆ ಬೇರೆಯಾಗುತ್ತಲೇ ಹೋಗುತ್ತದೆ.

ಬಿ.ಟಿ. ಜಾಹ್ನವಿ 1996ರಲ್ಲಿ ಮೊದಲ ಕಥಾಸಂಕಲನ 'ಕಳೆದುಕೊಂಡವಳು ಮತ್ತು ಇತರ ಕತೆಗಳು' ಪ್ರಕಟಪಡಿಸಿದರೆ, 2007ರಲ್ಲಿ 'ಹುಡುಕಾಟ' ಎಂಬ ಸಂಕಲನವನ್ನು ಪ್ರಕಟಪಡಿಸಿದ್ದಾರೆ. ಮೊದಲನೆಯ ಸಂಕಲನ ಸಹಜ ಜೀವನ ಪ್ರೀತಿಯುಳ್ಳ ಹೆಣ್ಣನ್ನು ಚಿತ್ರಿಸಿದರೆ ಎರಡನೆಯದು ತನ್ನ ವರ್ಗ ಹಾಗೂ ತನ್ನವರನ್ನು ರೂಪಿಸಿದ ಜೀವನವಿಧಾನ, ಭಾಷೆಯನ್ನು ಪ್ರಜ್ಞಾಪೂರ್ವಕವಾಗಿ ಬಳಸಿಕೊಳ್ಳುತ್ತದೆ. ಜಾಹ್ನವಿಯವರ ಕಥೆಗಳು ಮೊದಲ ಓದಿಗೆ ಮೆಚ್ಚುಗೆ ತರಿಸುವುದು ಅವು ಒಳಗೊಳ್ಳುವ, ಅಭಿವ್ಯಕ್ತಿಸುವ ಪ್ರಾಮಾಣಿಕ ಸಂವೇದನೆಗಳಿಗೆ. ಈ ಸಂವೇದನೆಗಳಿಗೆ ಯಾವುದನ್ನೂ ಬಚ್ಚಿಡುವ ಬಯಕೆಯಿಲ್ಲ; ಬಣ್ಣ ಹಚ್ಚುವ ತವಕವೂ ಇಲ್ಲ.

ಇಲ್ಲಿನ ಬಹುಪಾಲು ಕಥೆಗಳ ಕೇಂದ್ರ ಹೆಣ್ಣೇ ಆಗಿದ್ದಾಳೆ. ಈ ಹೆಣ್ಣು ಧರಿಸುವ ವೇಷಗಳು ಮಾತ್ರ ಬೇರೆ ಬೇರೆ. ಒಮ್ಮೆ ಮಗಳಾಗಿ, ತಾಯಿಯಾಗಿ, ಸೊಸೆಯಾಗಿ, ಜೀವಭಾವವನ್ನು ತಣಿಸುವ ಹೆಣ್ಣಾಗಿ, ವ್ಯಭಿಚಾರಿಯಾಗಿ, ಬಸವಿಯಾಗಿ... ಹೀಗೆ ಇಲ್ಲಿನ ಹೆಣ್ಣಿಗೆ ನಾನಾ ಮುಖಗಳಿವೆ. ಕಥೆಗಾರ್ತಿಯ ಸ್ಪಷ್ಟ ನಿಲುವೆಂದರೆ ಎಂತಹ ಸಂದರ್ಭ ದಲ್ಲೂ ತನ್ನ ಪಾತ್ರಗಳು ಸೋಲೊಪ್ಪಿಕೊಳ್ಳಬಾರದು ಎಂಬುದಾಗಿದೆ. ಹೀಗಾಗಿಯೇ ಇಲ್ಲಿನ ಪಾತ್ರಗಳು ಜೀವನವನ್ನು ತುಂಬು ಪ್ರೀತಿಯಿಂದ ಕಾಣುತ್ತವೆ, ಗೆಲ್ಲುವ ಪ್ರಯತ್ನವನ್ನು ಎಂತಹ ಸಂದರ್ಭದಲ್ಲಿಯೂ ಮಾಡುತ್ತವೆ. ಈ ಜೀವನ ಪ್ರೀತಿ, ಬದುಕಿನ ಸಮೃದ್ಧತೆಯೇ ಜಾಹ್ನವಿ ಯವರ ಕತೆಗಳ ಜೀವಾಳವಾಗಿದೆ. ಮೊದಲ ಸಂಕಲನದ ಬೆನ್ನುಡಿಯಲ್ಲಿ ಲಂಕೇಶ್ ಈ ಪ್ರೀತಿಯನ್ನು ಹೀಗೆ ಗುರುತಿಸುತ್ತಾರೆ–"ಬದುಕಿನ ವಿಚಿತ್ರಗಳನ್ನು ಕಂಡು ಎದುರಿಸುವ ದಿಟ್ಟತನದ ಜೊತೆಗೇ ಕಂಡದ್ದನ್ನು ಅದರೆಲ್ಲ ಸೊಗಡು ಮತ್ತು ಮುಗ್ಧತೆಯೊಂದಿಗೆ ಹೇಳುವ ಪ್ರತಿಭೆಯನ್ನು ಈ ಹೆಣ್ಣುಮಗಳಲ್ಲಿ ಕಾಣುತ್ತೇವೆ. ಸಾಹಿತಿಗೆ ಬೇಕಾದ ವಸ್ತುನಿಷ್ಠೆ ಮತ್ತು ಮಮತೆ ಇವರಲ್ಲಿ ಉದ್ದಕ್ಕೂ ಕಾಣುವ ವಿಶಿಷ್ಟ ಗುಣ."

ದಾಂಪತ್ಯ ಧರ್ಮದ ನಿಷ್ಠೆ, ಒಂಟಿತನ, ಲೈಂಗಿಕತೆ ಮುಂತಾದವನ್ನು ಸಮಾಜದ ಚೌಕಟ್ಟಿನೊಳಗೇ ಒಡೆಯುವ, ಸಂವಾದಿಯಾಗಿ ಹೊಸ ಆರೋಗ್ಯಕರ ಸಮಾಜವನ್ನು ಕಟ್ಟುವ ಸ್ಪಷ್ಟ ಅಭಿಪ್ರಾಯ ಈ ಕತೆಗಳಿಲ್ಲಿವೆ. ಈ ಬಂಡಾಯದ ಮನಃಸ್ಥಿತಿಯನ್ನು ನವ್ಯಸಾಹಿತ್ಯ ಸಂದರ್ಭದ ವೀಣಾ ಶಾಂತೇಶ್ವರ ಅವರ ಕಾದಂಬರಿಗಳು ಸೃಷ್ಟಿಸಿದ್ದರೂ ಆ ಬಂಡಾಯಕ್ಕೆ




**ಕಳೆದುಕೊಂಡವಳು ಮತ್ತು ಇತರ ಕತೆಗಳು–**
ಲೇ. : ಬಿ.ಟಿ. ಜಾಹ್ನವಿ
ಪ್ರ. : 'ಪತ್ರಿಕೆ' ಪ್ರಕಾಶನ
ಬಸವನಗುಡಿ
ಬೆಂಗಳೂರು – 01
ಮು : 1996

ಸ್ಪಷ್ಟವಾದ ಭೂಮಿಕೆಯಿರಲಿಲ್ಲ. ನವ್ಯಸಾಹಿತ್ಯದ ಲೇಖಕರಲ್ಲಿ ರೂಪುಗೊಂಡ ಅಸಂಗತ ನಾಯಕರಂತೆ ವೀಣಾರವರ ಸೃಷ್ಟಿಯಲ್ಲಿ ನಾಯಕಿಯರು ಮಾಡಿದರು. ಜಾಹ್ನವಿಯವರ ಕಥೆಗಳ ಶಿಕ್ಷಿತ ನಾಯಕಿಯರು ಪ್ರಜ್ಞಾಪೂರ್ವಕವಾಗಿಯೇ ಹೆಣ್ಣು ಗಂಡಿನ ಸಂಬಂಧ ವಿಶ್ಲೇಷಣೆಗೆ ತೊಡಗುವುದಲ್ಲದೆ ಅವರ ಸ್ವಘೋಷಿತ ನಿಲುವುಗಳು ಸ್ಪಷ್ಟ ವೈಚಾರಿಕತೆಯ ತಳಹದಿಯ ಮೇಲೆ ನಿಂತುಬಿಡುವುದಿಲ್ಲ. ಕ್ಷಣ ಕ್ಷಣಕ್ಕೂ ಬದಲಾಗುವ, ಎದುರಾಗುವ ಬದುಕಿಗೆ ತಕ್ಕಂತೆ ತಮ್ಮ ನಿಲುವನ್ನು ಬದಲಾಯಿಸಿಕೊಳ್ಳಬಲ್ಲವು. ಇವರ ಸಾಕಷ್ಟು ಚರ್ಚಿತವಾದ ಕಥೆ 'ವಿಮುಖ'ದಲ್ಲಿ ನಾಯಕ, ನಾಯಕಿಯರಿಬ್ಬರೂ ಆಧುನಿಕ ಜನಾಂಗವನ್ನು ಪ್ರತಿನಿಧಿಸುವವರು. ವಿವಾಹವೆಂಬ ಚೌಕಟ್ಟು ಪ್ರಾಮಾಣಿಕ ಸಂಬಂಧದೆದುರು ಅರ್ಥ ಕಳೆದುಕೊಂಡಿದೆ. ಮದುವೆಯಿಲ್ಲದಿದ್ದರೂ ದಂಪತಿಗಳಂತೆ ಇರಲು ಸಾಧ್ಯವಾಗುವ ಮೈತ್ರ ಮತ್ತು ರಘುವಿನ ಸಂಬಂಧ ಕುಸಿಯುವುದು ಭರತನ ಪ್ರವೇಶದಿಂದಾಗಿ. ಆಕಸ್ಮಿಕವಾಗಿ ಭರತನೊಂದಿಗೆ ಇಷ್ಟಕ್ಕೆ ವಿರುದ್ಧವಾಗಿ (ಬಲಾತ್ಕಾರದಿಂದಾಗಿ) ಕೂಡುತ್ತಾಳೆ. ಆ ಶರಣಾಗತಿಯು "ಬಲವೆಲ್ಲ ಸೋರಿ, ದೇಹ ದಣಿದು ನಡೆಯುವುದರಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ ಎಂಬ ಸತ್ಯ ನಿಚ್ಚಳವಾಗಿ, ಮನಸ್ಸು ಶರಣಾಗತಿ ಬಯಸಿತು. ಬಲಾತ್ಕಾರದಿಂದ ನಡೆಯುವುದೂ ಅದೇ, ಒಪ್ಪಿಕೊಂಡರೆ ನಡೆಯುವುದೂ ಅದೇ... ಒಪ್ಪಿಕೊಂಡರೆ ಹಿಂಸೆಯೆನಿಸದು ಎನ್ನಿಸಿದಾಗ ಒಳಗಿನ ಕೋಲಾಹಲ ಕ್ಷೀಣಿಸಿ, ...." ಎಂಬಂತೆ ವರ್ಣಿಸಲ್ಪಟ್ಟಿದೆ. ಇಷ್ಟು ಸಹಜವಾಗಿ ದೇಹದ ಮತ್ತು ಮನದ ಭಾಷೆಯನ್ನು ಬಳಸುವುದು ಸಾಮಾನ್ಯ ಬರಹಗಾರರಿಗೆ ಸಾಧ್ಯವಾಗದು. ಬಲಾತ್ಕಾರದಲ್ಲಿ ಆದ ಈ ಶರಣಾಗತಿ ಮುಂದೆ ಮೈತ್ರ ಮತ್ತು ರಘುವಿನ ಹಳಸಿದ ಸಂಬಂಧ ಸಂಪೂರ್ಣ ಕುಸಿಯುವಂತೆ ಮಾಡಿತು. ಹೊಸ ರೀತಿಯ ಸಂಬಂಧದ ಆವಿಷ್ಕಾರವೆನ್ನುವಂತೆ ಭರತನನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ.

ಈ ರೀತಿಯ ಸಂಬಂಧದಿಂದ ಸಂಬಂಧದೆಡೆಗೆ ಇಲ್ಲಿನ ಕತೆಗಳು ನಿರಂತರ ಹುಡುಕಾಟಕ್ಕೆ ತೊಡಗುತ್ತವೆ. ಈ ಹುಡುಕಾಟಗಳು ಹಲವು ಸಂದರ್ಭಗಳಲ್ಲಿ ಯೌವ್ವನದ ಲಹರಿಗಳು ಎನಿಸಿ ಹುಡುಗಾಟದಿಂದ ಆರಂಭವಾದದ್ದು ಗಂಭೀರತೆಯ ಕಡೆಗೆ ಸಾಗುವ ಮುಕ್ತಾಯಗಳು ಇಲ್ಲಿವೆ. 'ದೂಪ್ದಳ್ಳಿ ಸೆಕ್ಸಿ ದುರುಗ' ಕತೆಯಲ್ಲಿ ಅಮಾಯಕ ದಲಿತರ ಹುಡುಗ ದುರುಗನನ್ನು ಸ್ನೇಹಿತೆಯರು ರೇಗಿಸುತ್ತಲೇ ಅವನ ಮುಗ್ಧತೆಯನ್ನು ಛಿದ್ರಗೊಳಿಸುತ್ತಾರೆ. ಸೆಕ್ಸಿ ಪದದ ಅರ್ಥ ತಿಳಿದುಕೊಂಡ ದುರುಗ ರೇಖಳ ಮೇಲೆ ಆಕ್ರಮಣ ನಡೆಸಿ, ಆ ಕಾರಣಕ್ಕೆ ಕೊಲೆಯಾಗಬೇಕಾಗುತ್ತದೆ. ಇಂತಹ ಹುಡುಗಾಟದ ಹುಡುಕಾಟಗಳು ಸಂಪೂರ್ಣ ಹುಡುಗಿಯರದೇ ಆಗಿ ಹೊಸ ಸಮಾಜದ 'ತಳಿಗಳಾಗಿ' ಈ ಹುಡುಗಿಯರು ಚಿತ್ರಿತರಾಗುತ್ತಾರೆ. 'ವ್ಯಭಿಚಾರ' ಕತೆಯಲ್ಲಿ ಈ ಹುಡುಗಿಯರ ತಂಡ ಇನ್ನೊಂದು ಹುಡುಕಾಟವನ್ನು 'ಲೀಲಕ್ಕನ ವ್ಯಭಿಚಾರ'ವನ್ನು ಕುರಿತಂತೆ ನಡೆಸುತ್ತದೆ. ಸಮಸ್ಯೆಯನ್ನು ಹೊರಗಿನಿಂದಲೇ ಕಂಡವರಿಗೆ ಲೀಲಕ್ಕನ ಪರಪುರುಷನೊಂದಿಗಿನ ಸಂಬಂಧ ವ್ಯಭಿಚಾರವೆನಿಸುತ್ತದೆ. ಮುಂದೆ ನಾಯಕಿಯ ತಂಗಿ ಮದುವೆಯಾಗಿ ಗಂಡನೊಂದಿಗಿನ ಅವಳ ಸಂಬಂಧ ಕುಸಿದು ಬಿದ್ದಾಗ, ಅದು ಸರಿಪಡಿಸಲಾಗದ್ದು ಎನಿಸಿ ಲೀಲಕ್ಕನ ವ್ಯಭಿಚಾರ ಸಮರ್ಥನೀಯವಾಗುತ್ತದೆ. ಈ ಆಧುನಿಕ ವಿಚಾರಗಳನ್ನು ರೂಢಿಸಿಕೊಂಡ ಹುಡುಗಿಯರು ಎರಡನೇ ಸಂಕಲನದಲ್ಲಿ ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡ ಮಹಿಳೆಯರಾಗಿ ಅವಸ್ಥಾಂತರ ಹೊಂದುತ್ತಾರೆ. 'ಜೀರ್ಣ' ಕತೆಯ ಮಿಸೆಸ್ ಶ್ರೀಧರ್ ಓದಲೆಂದು ಬಂದ ಬಡ ಹುಡುಗನನ್ನು ಶೋಷಿಸುತ್ತಾ ಅವನ ಸಾವಿಗೆ ಕಾರಣಳಾಗುತ್ತಾಳೆ. ಈ ಶೋಷಣೆ ಹೊರಜಗತ್ತಿನ ಪ್ರಚಾರಕ್ಕೆ ಮರುಳಾಗಿ ನಡೆದದ್ದಾಗಿದ್ದು ಕೇವಲ ಅದೊಂದು ಕೌಟುಂಬಿಕ ಸಮಸ್ಯೆ ಎಂಬಂತೆ ನೀರಸವಾಗಿ ಅಂತ್ಯವನ್ನು ಕಂಡುಕೊಳ್ಳುತ್ತದೆ. 'ನೆಲಬಾನಿನ ಗೆಳೆತನದಲ್ಲಿ' ಒಬ್ಬ ಪ್ರತಿಭಾವಂತ ಲೇಖಕ ಸುಧಾಕರನಿಗೋಸ್ಕರ ಪಾರ್ವತಿಯೊಡನೆ ನಡೆಸುವ ಪ್ರಭಾಳ ವಾಗ್ವಾದ, ಹೋರಾಟವನ್ನು ಚಿತ್ರಿಸುತ್ತದೆ. ದೈಹಿಕವಾಗಿ ಬಂಧಿಸಿದರೆ ತಾನು ಸುಧಾಕರನನ್ನು ಪಡೆಯಬಹುದು ಎಂದಿದ್ದ ಪ್ರಭಾಳ ಕನಸು ನುಚ್ಚುನೂರಾಗುತ್ತದೆ. ಸಂಬಂಧಗಳನ್ನು ಪಡೆಯುವುದಕ್ಕೆ ಸಂಬಂಧಗಳನ್ನು ಪರೀಕ್ಷೆಗೆ ಒಡ್ಡಿಕೊಳ್ಳುವ, ಸೋಲು-ಗೆಲುವುಗಳನ್ನು ಧೈರ್ಯದಿಂದ ಎದುರಿಸುವ ಛಾತಿ ಇಲ್ಲಿನ ನಾಯಕಿಯರಿಗಿದೆ. ತಪ್ಪು, ಒಪ್ಪುಗಳನ್ನು ಸಮನಾಗಿ ಕಾಣುವ ಇಲ್ಲಿನ ನಾಯಕಿಯರು ಲೋಕದ ಹಂಗನ್ನು ತೊರೆದವರು. ತಮಗೆ ಸರಿ ಎನಿಸಿದ್ದನ್ನಷ್ಟೇ ಒಪ್ಪುವ, ತಿರಸ್ಕರಿಸುವ ಸ್ವತಂತ್ರ ವ್ಯಕ್ತಿತ್ವವುಳ್ಳವರಾಗಿದ್ದಾರೆ.

ತಾಯಿ ಮತ್ತು ತಂದೆಯರನ್ನು, ಅವರ ದಾಂಪತ್ಯವನ್ನು ಪ್ರಶ್ನಿಸುವ, ವಿಮರ್ಶಿಸುವ ಮುಕ್ತ ಮನಸ್ಸಿನ ಹಲವು ಚಿಂತನೆಗಳು ಇಲ್ಲಿವೆ. ಪಿತೃಪ್ರಧಾನ ಕುಟುಂಬವ್ಯವಸ್ಥೆಯಲ್ಲಿ ಗಂಡಸಿನ ಯಜಮಾನಿಕೆ ಯಾವಾಗಲೂ ಪ್ರಶ್ನಾತೀತವಾಗಿರುತ್ತದೆ. ಈ ಯಜಮಾನಿಕೆಯನ್ನು ಪ್ರಶ್ನಿಸುವ ಇಲ್ಲಿನ ಹಲವು ಕತೆಗಳು ತಾಯಿಯನ್ನು ತಾಯಿಯೆಂದು ಗಣಿಸದೆ ಒಬ್ಬ ಸ್ತ್ರೀಯನ್ನಾಗಿ ಕಂಡು ಅವಳ ಮೇಲೆ ದೌರ್ಜನ್ಯ ನಡೆಸುವ ತಂದೆಯನ್ನು ಕೇವಲ ಒಬ್ಬ ಗಂಡಸನ್ನಾಗಿ ಕಾಣುತ್ತವೆ. ಈ ರೀತಿಯ ಚಿತ್ರಣಗಳು ಕುಟುಂಬದೊಳಗಿದ್ದು ಕುಟುಂಬ ವ್ಯವಸ್ಥೆಯ ಬಗ್ಗೆ ಜಿಗುಪ್ಸೆ ತಾಳಿದ, ಧ್ವನಿಯಿಲ್ಲದೆ ಕುಟುಂಬದ ದೌರ್ಜನ್ಯವನ್ನು ಜೀರ್ಣಿಸಿಕೊಂಡ ಅಮಾಯಕ ಮಕ್ಕಳನ್ನು ಚಿತ್ರಿಸುತ್ತವೆ. 'ಹುಡುಕಾಟ' ಈ ದೃಷ್ಟಿಯಿಂದ ಬಹುಮುಖ್ಯವಾದ ಕತೆ. ಅಪ್ಪನ ದೌರ್ಜನ್ಯವನ್ನು, ತಾಯಿಯ ಅಸಹಾಯತೆಯನ್ನು ನೋಡುತ್ತಾ ಬೆಳೆದವಳು ಮುಂದೆ ತನ್ನ ಮದುವೆಯಾದಾಗ ಅದೇ ದೌರ್ಜನ್ಯಕ್ಕೆ ತಾನೂ ಎದುರಾಗಬೇಕಾಗುತ್ತದೆ. ತಂದೆಯ ದೌರ್ಜನ್ಯವನ್ನು ದ್ವೇಷಿಸುತ್ತಾ ಬಂದವಳು ಗಂಡನ ದೌರ್ಜನ್ಯವನ್ನು ಅನುಭವಿಸಬೇಕಾಗುತ್ತದೆ. ಆದರೆ ಆ ಕ್ಷಣದಲ್ಲಿ ಅವಳ ಮನಸ್ಸು ಆ ವ್ಯವಸ್ಥೆಯನ್ನು ಧಿಕ್ಕರಿಸಿ ಹೊರಬರುವಂತೆ ಮಾಡುತ್ತದೆ. ಅವಳ ಈ ಮುಂದಿನ ಮಾತು ಧಿಕ್ಕಾರವನ್ನು ತೋರುತ್ತದೆ – "ಷಣ್ಮುಖಪ್ಪ, ನಾನು ಹಣ ಕಾಣದವಳಲ್ಲ. ದರ್ಪ ದಬ್ಬಾಳಿಕೆಯೂ ಬಲ್ಲೆ. ನನ್ನಪ್ಪನಲ್ಲಿ ಈ ಎಲ್ಲವೂ ಇವೆ. ಆದರವು ಹುಟ್ಟಿನಿಂದ ಬಂದಂಥವು. ಆದ್ದರಿಂದಲೇ ನಿನ್ನ ಹಾಗೆ ಅಪ್ಪ ಥೋಂಗಿ ಎನಿಸುವುದಿಲ್ಲ. ಅವನನ್ನು ಹೆಜ್ಜೆ ಹೆಜ್ಜೆಗೂ ಟೀಕಿಸುತ್ತಿದ್ದ ನೀನು ಏನಾಗಿ ಹೋಗಿದ್ದಿ ಈಗ...? ಅಧಿಕಾರದ ಐಶ್ವರ್ಯದ ಪೊರೆ ಬಂದು ನಿನ್ನತನ ಕಳ್ಕೊಂಡಿದ್ದೀ..."

ತಾಯಿ ತಂದೆಯರ ವಿಷಮ ದಾಂಪತ್ಯ, ತಂದೆಯ ದೌರ್ಜನ್ಯ ಅಳಿಸ ಹಾಕಲಾರದ್ದು ಎಂದು ಚಿತ್ರಿಸುವ ಇನ್ನೊಂದು ಕತೆ 'ತಾಯ್ತನ.' ತಂದೆಯ ದೌರ್ಜನ್ಯವನ್ನು ಒಳಗೊಳಗೇ ದ್ವೇಷಿಸುತ್ತಾ ಬಂದವಳು ಪುರುಷ ಜಗತ್ತನ್ನೇ ದ್ವೇಷಿಸುವಷ್ಟು ಅಸ್ವಸ್ಥಳಾಗುತ್ತಾಳೆ. ತನ್ನ ಗಂಡನ ದೌರ್ಜನ್ಯವನ್ನು ಸಹಿಸಿದರೂ ತನ್ನ ಗರ್ಭದಲ್ಲಿ ಗಂಡುಮಗು ಜನಿಸಬಾರದೆಂಬಷ್ಟು ಪುರುಷದ್ವೇಷಿಯಾಗುತ್ತಾಳೆ. ತನ್ನ ತಂದೆ ಅಪಘಾತಕ್ಕೀಡಾಗಿ ಆಸ್ಪತ್ರೆಗೆ ಸೇರಿದಾಗ ಅವಳ ಮನಸ್ಸು ದ್ವೇಷದಿಂದ ಚೀರುತ್ತದೆ –

**ಹುಡುಕಾಟ**
ಲೇ. : ಬಿ.ಟಿ. ಜಾಹ್ನವಿ
ಪ್ರ. : ಮಾತಂಗ ಪ್ರಕಾಶನ
ಉದಯಗಿರಿ ಬಡಾವಣೆ, ಮೈಸೂರು-19. ಮು : 2007

"ಕೊಚ್ಚಿ ಕೊಚ್ಚಿ ಹಾಕಿ ಡಾಕ್ಟರ್... ತುಂಡುತುಂಡು ಮಾಡಿಬಿಡಿ ಆ ಕಾಲುಗಳನ್ನು...... ಅಮ್ಮಾ ... ನಿನಗೆ ಮಾಡಿದ್ದನ್ನೆಲ್ಲಾ ಈಗ ತೀರಿಸುತ್ತಿದ್ದಾನಮ್ಮಾ ... ಈಗ ತೀರಿಸುತ್ತಿದ್ದಾನೆ...!" ಇಂತಹ ಹಲವಾರು ಛಿದ್ರಗೊಂಡ ಸಂಬಂಧಗಳನ್ನು, ಅವಮಾನಕ್ಕೆ ಈಡಾದ ಲೋಕಗಳನ್ನು ತುಂಬಾ ಸಹಜ ವೆನ್ನುವಂತೆ ಚಿತ್ರಿಸಿದ್ದಾರೆ.

ದಲಿತರನ್ನು ಮೇಲ್ವರ್ಗದವರು ಶೋಷಿಸುತ್ತಾರೆ ಎಂಬುದು ನಾವು ಕೇಳಿದ ಮತ್ತು ಕಂಡ ಸತ್ಯವಾಗಿದೆ. ದಲಿತ ಲೋಕದ ಏಳುಬೀಳುಗಳನ್ನು ಸಹಜವಾಗಿ ಚಿತ್ರಿಸುವ ಜಾಹ್ನವಿ ವಿಶಿಷ್ಟವಾಗುವುದು ದಲಿತರು ದಲಿತರ ಮೇಲೆಯೇ ನಡೆಸುವ ದೌರ್ಜನ್ಯಗಳನ್ನು ಚಿತ್ರಿಸುವಲ್ಲಿ. ಈ ಚಿತ್ರಣಗಳಲ್ಲಿ ಹೆಚ್ಚು ಕಲಿತ ದಲಿತರು ತಮಗಿಂತ ಕೆಳಗಿರುವವರನ್ನು ತುಳಿಯುವಲ್ಲಿ ಪಡೆದುಕೊಳ್ಳುವ ತೃಪ್ತಿಯನ್ನು ಚಿತ್ರಿಸುತ್ತಾರೆ. ಲಾಗಾಯ್ತಿನಿಂದ ನಡೆದು ಬಂದ ಕ್ರೌರ್ಯಕ್ಕಿಂತಲೂ ಈ ಕ್ರೌರ್ಯ ಹೇಸಿಗೆ ಹುಟ್ಟಿಸುವಂತಿದೆ. ಈ ಚಿತ್ರಣಗಳನ್ನು 'ಕನಸು'ವಿನ ಅಣ್ಣಯ್ಯ, 'ಜೀರ್ಣ'ದ ಮಿಸೆಸ್ ಶ್ರೀಧರ್‌ನ ಮೂಲಕ ಚಿತ್ರಿಸುತ್ತಾರೆ. ಈ ಚಿತ್ರಣಗಳಲ್ಲಿ ಶೋಷಕರು ಯಾರು? ಎಂಬುದರ ಬಗ್ಗೆ ನಡೆಸುವ ಜಿಜ್ಞಾಸೆ ತಳ ಸಮುದಾಯದ ಬಗ್ಗೆ ನಡೆಸುವ ಜಿಜ್ಞಾಸೆಯೂ ಆಗಿದೆ.

ಜಾಹ್ನವಿಯರ ಎರಡೂ ಸಂಕಲನಗಳು ನಡೆಸುವ ಹುಡುಕಾಟಗಳು ದೌರ್ಜನ್ಯದ ಸುತ್ತಲೇ ಆಗಿರುತ್ತವೆ. ಈ ದೌರ್ಜನ್ಯ ಗಂಡುಹೆಣ್ಣಿನ ನಡುವಣ ಸಂಬಂಧವಾಗಬಹುದು, ವ್ಯಭಿಚಾರವಾಗಬಹುದು, ಕಲಿಯುವ ಆಸೆಯ ಮಕ್ಕಳದಾಗ ಬಹುದು ತಂದೆ ತಾಯಿಯರ ಸಂಬಂಧವಾಗಬಹುದು. ಈ ದೌರ್ಜನ್ಯಕ್ಕೆ ಹಲವು ಮುಖಗಳಿವೆ. ಈ ಮುಖಗಳನ್ನು ಸ್ನೇಹದ ಮೂಲಕ, ಪ್ರಣಯದ ಮೂಲಕ, ತಾಯ್ತನದ ಮೂಲಕ ಬಿಡಿಸುವ ಪ್ರಯತ್ನವನ್ನು ಜಾಹ್ನವಿ ಮಾಡಿದ್ದಾರೆ. ಮುಖ್ಯವಾದ ಸಂಗತಿಯೆಂದರೆ ಎಲ್ಲದರ ಕೇಂದ್ರ ಹೆಣ್ಣು. ಆ ಹೆಣ್ಣಿಗೆ ಇರುವ ಹಲವು ವ್ಯಕ್ತಿತ್ವಗಳು, ಅವು ತಳೆಯುವ ನಿಲುವುಗಳು ದಿಗ್ಭ್ರಮೆ ಹುಟ್ಟಿಸುತ್ತವೆ. ಇಲ್ಲಿನ ಹೆಣ್ಣು ಗೆಲುವಿನತ್ತಲೇ ಹೆಜ್ಜೆಯಿಟ್ಟವಳು, ಸೋತು ಹಿಂದೆಗೆಯು ವವಳಲ್ಲ. ಅಲ್ಲಲ್ಲಿ ಬಳಕೆಯಾಗುವ ದಾವಣಗೆರೆಯ ಭಾಷೆ ವ್ಯಕ್ತಿತ್ವದ ಗಟ್ಟಿತನವೆಂಬಂತೆ ಕತೆಗಳಿಗೆ ಮೆರುಗುಕೊಟ್ಟಿದೆ. ಮೊದಲನೆಯ ಸಂಕಲನಕ್ಕಿಂತಲೂ ಎರಡನೆಯದರಲ್ಲಿ ಹೆಚ್ಚು ದಲಿತಜಗತ್ತು ಹಾಗೂ ಅದರ ಚಿತ್ರಣದಲ್ಲಿ ನಿಖರವಾಗುವ ಬಿ.ಟಿ. ಜಾಹ್ನವಿ ಕನ್ನಡದ ಕತೆಗಾರ್ತಿಯರ ಮಧ್ಯೆ ವಿಭಿನ್ನವಾಗಿಯೇ ನಿಲ್ಲುತ್ತಾರೆ. ದಾವಣಗೆರೆಯ ಪ್ರಸಿದ್ಧ ನೇತ್ರವೈದ್ಯರೂ, ಶಾಸಕರೂ ಆಗಿದ್ದ ಡಾ॥ ಬಿ.ಎಂ. ತಿಪ್ಪೇಸ್ವಾಮಿಯವರ ಮಗಳಾದ ಬಿ.ಟಿ. ಜಾಹ್ನವಿಗೆ ತಂದೆ ಸವೆಸಿದ ಮಾರ್ಗದ ಅರಿವಿದೆ. ಹೀಗಾಗಿಯೇ ಇಲ್ಲಿನ ಕತೆಗಳು ಆಧುನಿಕ ಯುವಜನಾಂಗದ ಸಮಸ್ಯೆಗಳಿಗೆ ಸ್ಪಂದಿಸಿದಷ್ಟೇ ತೀವ್ರವಾಗಿ ತನ್ನ ಜನಾಂಗದ ಸಮಸ್ಯೆಗಳಿಗೂ ಸ್ಪಂದಿಸುತ್ತವೆ. ❑

## ತಪಸಿ ಸಾವಿಗೆ ದೊರೆಯದ ನ್ಯಾಯ

ಪಶ್ಚಿಮ ಬಂಗಾಳದಲ್ಲಿ ನ್ಯಾನೋ ವಿರುದ್ಧದ ಹೋರಾಟದ ಸಂದರ್ಭ. ಡಿಸೆಂಬರ್ 18, 2006ರಂದು ಹದಿನೆಂಟು ವರ್ಷದ ತಪಸೀ ಮಾಲಿಕಳ ಸುಟ್ಟದೇಹ ಸಿಂಗೂರಿನ ನ್ಯಾನೊ ಸೈಟ್ ಬಳಿ ದೊರೆತಿತ್ತು. ಈಕೆಯ ಮೇಲೆ ಅತ್ಯಾಚಾರ ವೆಸಗಿ, ಆಕೆಯನ್ನು ಕೊಲೆ ಮಾಡಿ ಸುಟ್ಟು ಹಾಕಲಾಗಿತ್ತು. ಸಿ.ಪಿ.ಐ.ಎಂ. ಕಾರ್ಯಕರ್ತರ ಹಾಗೂ ತೃಣಮೂಲ ಕಾಂಗ್ರೆಸ್ ಕಾರ್ಯಕರ್ತರ ನಡುವೆ ನ್ಯಾನೊ ಕಾರು ಘಟಕದ ಸ್ಥಾಪನೆಯ ವಿವಾದ ಕುರಿತು ಮಾರಾಮಾರಿ ಹೋರಾಟವೇ ನಡೆದಿತ್ತು. ತಪಸಿ ಸಾವಿನ ಬಗ್ಗೆ ಸಿ.ಬಿ.ಐ ತನಿಖೆ ನಡೆಸಬೇಕೆಂದು ತೃಣಮೂಲ ಕಾಂಗ್ರೆಸ್ ಹೋರಾಟ ನಡೆಸಿತು. ಸಿ.ಪಿ.ಐ.ಎಂ. ಕಾರ್ಯಕರ್ತರು ತಪಸಿಯನ್ನು ಆಕೆಯ ತಂದೆ, ಹಾಗೂ ಸಹೋದರರೇ ಅಥವಾ ಆಕೆಯ ಪ್ರಿಯಕರ ಈ ಕೊಲೆಯನ್ನು ಮಾಡಿರಬೇಕು ಅಥವಾ ಆಕೆಯೇ ಆತ್ಮಹತ್ಯೆ ಮಾಡಿಕೊಂಡಿರಬೇಕು ಎಂಬ ವಂದತಿಯನ್ನು ವ್ಯವಸ್ಥಿತವಾಗಿ ಹಬ್ಬಿಸಿದ್ದರು.

ತೃಣಮೂಲ ಕಾಂಗ್ರೆಸ್ ನಡೆಸಿದ ಪ್ರತಿಭಟನೆಯ ಫಲವಾಗಿ ಮುಖ್ಯಮಂತ್ರಿ ಯವರು ಈ ಪ್ರಕರಣವನ್ನು ಸಿ.ಬಿ.ಐ. ತನಿಖೆಗೆ ವಹಿಸಿದರು.

ಈಗ ಸಿ.ಬಿ.ಐ. ತನಿಖೆ ನಡೆಸಿರುವುದಲ್ಲದೆ ಚಂದಾನಗರ ನ್ಯಾಯಾಲಯ ತಪಸಿಯನ್ನು ಸ್ಥಳೀಯ ಸಿ.ಪಿ.ಐ.ಎಂ. ಪ್ರಭಾವಿ ಕಾರ್ಯಕರ್ತ ಹಾಗೂ ಸಿಂಗೂರು ವಿಭಾಗದ ಕಾರ್ಯದರ್ಶಿ ಇಬ್ಬರು ಆಕೆಯ ಮೇಲೆ ಅತ್ಯಾಚಾರ ನಡೆಸಿ, ಕೊಲೆ ಮಾಡಿದ್ದಾರೆಂದು ತೀರ್ಪು ನೀಡಿ ಅವರಿಗೆ ಜೀವಾವಧಿ ಶಿಕ್ಷೆಯನ್ನು ನೀಡಿದೆ.

ಐದು ತಿಂಗಳ ಹಿಂದೆಯೇ ತಪಸೀ ಮಾಲಿಕಳನ್ನು ಅಮಾನುಷವಾಗಿ ಕೊಲೆಮಾಡಿ, ಆಕೆಯ ದೇಹಕ್ಕೆ ಬೆಂಕಿ ಹಚ್ಚಿ ಸುಡಲಾಗಿತ್ತು. ಅರೆಬರೆಯಾಗಿ ಸುಟ್ಟ ದೇಹವನ್ನು ನ್ಯಾನೊ ಸೈಟ್‌ನಲ್ಲಿ ತಂದು ಹಾಕಲಾಗಿತ್ತು. ಈ ಕೃತ್ಯವನ್ನು ಆಕೆಯ ತಂದೆ ಹಾಗೂ ಆಕೆಯ ಸಹೋದರರೇ ನಡೆಸಿರಬೇಕೆಂದು ಅವರನ್ನು ಮಂಪರು ಪರೀಕ್ಷೆಗೆ ಒಳಪಡಿಸಬೇಕೆಂದು, ಸಿ.ಬಿ.ಐ. ಪೂರ್ವಾಗ್ರಹದಿಂದ ಕೂಡಿದೆಯೆಂದು, ಸಿ.ಪಿ.ಐ.ಎಂ. ಕಾರ್ಯಕರ್ತರು ತಮ್ಮ ಬೇಡಿಕೆಯನ್ನು ಮುಂದಿಟ್ಟರು.

ಸಿಂಗೂರು ಹೋರಾಟದ ನಾಯಕತ್ವವನ್ನು ವಹಿಸಿಕೊಂಡಿದ್ದ ತಪಸಿಯ ಬಗ್ಗೆ ಇಲ್ಲಸಲ್ಲದ ಕತೆಗಳನ್ನು ಸಿ.ಪಿ.ಐ.ಎಂ. ಕಾರ್ಯಕರ್ತರು ಹರಡತೊಡಗಿದರು. ಆಕೆಯ ತಂದೆ ಬಡ ಮೀನುವ್ಯಾಪಾರಿಯಾಗಿದ್ದ, ಸಿಂಗೂರಿನಲ್ಲಿ ಆತನಿಗೆ ಭೂಮಿ ಇರಲಿಲ್ಲ. ಹಾಗೂ ಅವಿವಾಹಿತಳಾಗಿದ್ದ ಆಕೆ, ತಂದೆಗೆ ಹೊರೆಯಾಗಿದ್ದಳು. ಈ ಕಾರಣದಿಂದ ತಂದೆ ಹಾಗೂ ಆಕೆಯ ಸಹೋದರ ಜೊತೆಗೂಡಿ ಆಕೆಯನ್ನು ಕೊಲೆ ಮಾಡಿದ್ದಾರೆಂದೂ ಅವರನ್ನು ತನಿಖೆಗೆ ಒಳಪಡಿಸಬೇಕೆಂದೂ ಸಿ.ಬಿ.ಐ.ಯನ್ನು ಒತ್ತಾಯಿಸಿದ್ದಾರೆ. ಹೀಗೆ ಸಿ.ಪಿ.ಐ.ಎಂ. ಕಾರ್ಯಕರ್ತರು ಹಾಗೂ ನಾಯಕರು ಮಹಿಳೆಯೊಬ್ಬಳ ಮೇಲೆ ನಡೆಸಿದ ಅಮಾನುಷ ದೌರ್ಜನ್ಯವನ್ನು ಮುಚ್ಚಿ ಹಾಕುವಲ್ಲಿ ಯಶಸ್ವಿಯಾದರು. ಸಿ.ಪಿ.ಐ.ಎಂ. ಕಾರ್ಯಕರ್ತರು ಸಿಂಗೂರು ಹೋರಾಟದ ಸಂದರ್ಭದಲ್ಲಿ ಮಹಿಳೆಯರ ಮೇಲೆ ನಡೆಸಿದ ಅಮಾನುಷ ಹಲ್ಲೆ, ದೌರ್ಜನ್ಯ ಹಾಗೂ ಅತ್ಯಾಚಾರದ ಪ್ರಕರಣಗಳು ಸಾಕಷ್ಟಿವೆ. ತಪಸಿಯ ಕೊಲೆಯ ರಕ್ತದ ವಾಸನೆ ಸಿ.ಪಿ.ಐ.ಎಂ. ಕಾರ್ಯಕರ್ತರ ಕೈಗಂಟಿದೆ. ಹೂಗ್ಲಿ ಜಿಲ್ಲೆಯ ಚಂದನಾ ನಗರದ ನ್ಯಾಯಾಲಯದ ಮುಂದೆ 'ಆಲ್ ಇಂಡಿಯಾ ಪ್ರೊಗ್ರೆಸಿವ್ ವಿಮೆನ್ಸ್ ಅಸೋಸಿಯೇಶನ್'ರವರು ಪ್ರತಿಭಟಿಸಿ ನ್ಯಾಯಕ್ಕಾಗಿ ಮುಖ್ಯ ಮಂತ್ರಿಯವರನ್ನು ಒತ್ತಾಯಿಸಿದ್ದಾನೆ.

*ಮೂಲ : ವಿಮೆನ್ ವಾಯ್ಸ್, ಆಲ್ ಇಂಡಿಯಾ ಪ್ರೊಗ್ರೆಸಿವ್ ವಿಮೆನ್ಸ್ ಅಸೋಸಿಯೇಷನ್ ಬುಲೆಟಿನ್*



# ಒಂದು ಜೀವಕ್ಕಿಂತ ಗಂಡು ಮಗು ಎಂಬುದು ಹೆಚ್ಚೆ?

• ಲಲಿತಾ ಸಿದ್ದಬಸವಯ್ಯ

ಇವೆರಡೂ ನಿಜ ಘಟನೆಗಳು ಮತ್ತು ಪ್ರತ್ಯಕ್ಷ/ಪರೋಕ್ಷವಾಗಿ ನನ್ನ ಕಣ್ಣೆದುರಿಗೇ ಸಂಭವಿಸಿದ ಘಟನೆಗಳು. ಪರೋಕ್ಷವಾಗಿ ಮತ್ತು ಕಣ್ಣೆದುರು ಈ ಎರಡೂ ಪದ ವಿರೋಧಾಭಾಸ ಎನ್ನಿಸಬಹುದು. ನನ್ನ ಮಗನ ಕಣ್ಣಿಂದ ನಾನು ನೋಡಿದ್ದೆಂಬುದರಿಂದ ಹೀಗೆ ಬರೆಯುತ್ತಿದ್ದೇನೆ.

ನನ್ನ ಮಗ ಒಬ್ಬ ಫೊರೆನ್ಸಿಕ್‌ತಜ್ಞ ವೈದ್ಯ. ಸರ್ಕಾರಿ ವೈದ್ಯಕೀಯ ಕಾಲೇಜಿನಲ್ಲಿ ಪ್ರಾಧ್ಯಾಪಕ. ಈ ಕಾಲೇಜಿಗೆ ಲಗತ್ತಾದ ಸರ್ಕಾರಿ ಆಸ್ಪತ್ರೆಗೆ ಒಂದು ರಾತ್ರಿ ಎಂಟುತುಂಬಿ ಒಂಬತ್ತನಯ ತಿಂಗಳಿಗೆ ಬಿದ್ದಿರುವ ಗರ್ಭಿಣಿ ಹೆಂಗಸೊಬ್ಬಳು ಅಸಹಜ ಹೊಟ್ಟೆನೋವಿನಿಂದ ತೀವ್ರ ಘಾಸಿಪಡುತ್ತ ದಾಖಲಾದಳು. ದಾಖಲಾಗಿ ಇನ್ನೂ ಚಿಕಿತ್ಸೆ ಆರಂಭಿಸುವ ಮೊದಲೇ ಆಕೆ ಮೃತಳಾದಳು. ಇಂತಹ ಸಂದರ್ಭದಲ್ಲಿ ಮೃತದೇಹದ ಮರಣೋತ್ತರ ಪರೀಕ್ಷೆ ಮಾಡದೆ, ಸಾವಿನ ಕಾರಣ ಖಚಿತಪಡಿಸಿಕೊಳ್ಳದೆ ಶವವನ್ನು ಹಸ್ತಾಂತರ ಮಾಡುವುದಿಲ್ಲ. ಇದು ಒಂದು ನಿಯಮ. ಈ ಮರಣೋತ್ತರ ಪರೀಕ್ಷೆ ಮಾಡಿದವನು ನನ್ನ ಮಗ, ಫೊರೆನ್ಸಿಕ್‌ತಜ್ಞ

ಈ ಗರ್ಭಿಣಿ ಹೆಂಗಸಿನ ಸಾವಿಗೆ, ಮತ್ತು ಆ ಮೊದಲಿನ ಆಕೆಯ ಹೊಟ್ಟೆನೋವಿಗೆ ಕಾರಣ ಶಿಶುವು ಗರ್ಭಚೀಲದಿಂದ ಹೊರಗಡೆ ಬಂದಿತ್ತು. ಇಂತಹುದಕ್ಕೆ ವೈದ್ಯಭಾಷೆಯಲ್ಲಿ 'ಯೂಟ್ರಸ್ ರಪ್ಚರ್' ಎನ್ನುತ್ತಾರೆ. ಹಾಗಾದರೆ ಇದು ಮೊದಲೇ ಆಕೆಗೆ ತಿಳಿದಿರಲಿಲ್ಲವೆ? ಆಕೆಯನ್ನು ಪರೀಕ್ಷಿಸುತ್ತಿದ್ದ ವೈದ್ಯರಿಗೆ ಗೊತ್ತಿರಲಿಲ್ಲವೆ? ಗರ್ಭಚೀಲ ಹರಿಯುವ ಸಾಧ್ಯತೆ ತಿಳಿಸಿರಲಿಲ್ಲವೆ? ಇಲ್ಲಿಯೇ ಮನಕಲಕುವ ಸತ್ಯವಿರುವುದು. ಈ ಹೆಂಗಸಿಗೆ ಇದು ನಾಲ್ಕನೆಯ ಬಸಿರು. ಮೊದಲ ಮೂರು ಹೆಣ್ಣುಮಕ್ಕಳು ಮತ್ತು ನಡುವೆ ಕೆಲವು ಗರ್ಭಪಾತಗಳು. ಇದರಿಂದ ದುರ್ಬಲಳಾಗಿದ್ದ ಈಕೆಯ ದೇಹಸ್ಥಿತಿಯನ್ನು ಪರೀಕ್ಷಿಸಿದ ವೈದ್ಯರು, ಹಿಂದಿನ ಹೆರಿಗೆಯಲ್ಲಿಯೇ ಬಹುಖಚಿತವಾಗಿ ಇನ್ನು ಮುಂದೆ ಈಕೆ ಗರ್ಭವತಿಯಾದರೆ ಜೀವಹೋಗುವ ಅಪಾಯವಿದೆಯೆಂಬ ಎಚ್ಚರಿಕೆ ಕೊಟ್ಟಿದ್ದರು. ಆದರೆ ಗಂಡು ಮಗು ಬೇಡವೆ? ಈ ಮೋಹ ಅಷ್ಟೊಂದು ಸುಲಭವಾಗಿ ಹೋಗಬಲ್ಲುದೆ? ಸ್ವತಃ ಆ ಹೆಂಗಸು ಗಂಡುಮಗುವಿಗೆ ಹಂಬಲಿಸಿದ್ದೂ ಸರಿ, ಆಕೆಯ ಹತ್ತು ಪಟ್ಟು ಹಂಬಲ ಅತ್ತೆ ಮತ್ತು ಗಂಡನಿಗಿದ್ದದ್ದು ಇನ್ನೂ ಸರಿ. ಅತ್ತೆ ಮತ್ತು ಗಂಡ ಇಬ್ಬರಲ್ಲೊಬ್ಬರು ಆಕೆಗೆ ಧೈರ್ಯ ನೀಡಿ ಬೆನ್ನಿಗೆ ನಿಂತಿದ್ದರೆ ಆಕೆ ತನ್ನ ಹಂಬಲ ತೊರೆದುಬಿಡುತ್ತಿದ್ದಳೇನೋ. ಅದರ ಬದಲು ಏನಾದರಾಗಲೀ ಒಂದು ಗಂಡುಮಗು ಬೇಕೇ ಬೇಕು, ಅದರಲ್ಲೂ ಮೂರು ಹೆಣ್ಣಿನ ಹಿಂದೆ ಒಂದು ಗಂಡಾಗುವುದು ಕಲಶವಿದ್ದಂತೆ, ಅದೃಷ್ಟದ ಸಂಕೇತ ಎಂಬ ಜನಜನಿತ ಮಾತನ್ನು ಬೇರೆ ಪದೇ ಪದೇ ಹೇಳಿ ಅತ್ತೆ ಆಕೆಯನ್ನು ಇನ್ನೊಂದು ಬಸಿರಿಗೆ ಪ್ರೇರಿಸಿದಳು.

ಸ್ವತಃ ಆ ಹೆಂಗಸಿಗೆ ಗಂಡುಮಗುವನ್ನು ಹೆರದೆ ಇದ್ದರೆ ಓರಗಿತ್ತಿ, ಅತ್ತಿಗೆ, ನಾದಿನಿಯರಂತಹ ಮಡಿಲಿನಕೆಂಡದ ಸಂಬಂಧಿಗಳ ಕುಹಕವನ್ನೂ ಮತ್ತು ತನ್ನ ಅಕ್ಕ, ತಂಗಿ, ಅಮ್ಮಂದಿರ ಅನುಕಂಪವನ್ನೂ ಸಹಿಸಿಕೊಳ್ಳಬೇಕಾಗುತ್ತದೆಂಬ ದಿಗಿಲೇ ಹೆಚ್ಚಾಗಿ, ತನ್ನನ್ನು ಪ್ರತ್ಯೇಕವಾಗಿ ಕರೆದು ವೈದ್ಯ ಹೇಳಿದ್ದ "ಗರ್ಭಚೀಲ ದುರ್ಬಲಗೊಂಡಿದೆ. ಇನ್ನೊಂದು ಮಗುವನ್ನು ಈ ಚೀಲ ಹಿಡಿದಿಟ್ಟುಕೊಳ್ಳುವುದಿಲ್ಲ. ಚೀಲ ಹರಿದು ಮಗು ಹೊರಬಂದು ನೀನು ಸಾಯಬಹುದೆಂಬ" ಮಾತೂ ಮರೆತು ಹೋಯಿತು. ಇದರೊಂದಿಗೆ ಗಂಡುಮಗುವೊಂದು ಆಗದೇ ಇದ್ದರೆ ಎಂದಾದರೊಂದು ದಿನ ಗಂಡ ಎರಡನೆ ಮದುವೆಯ ಮಾತು ಎತ್ತಬಹುದು, ನಾಳೆ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಳ್ಳುವ ಬೀಗರು, ತಾಯಿಗೆ ಗಂಡುಸಂತಾನವಿಲ್ಲವೆಂಬ ಕೊರತೆಯನ್ನೇ ಮುಂದು ಮಾಡಬಹುದು ಇತ್ಯಾದಿ ಭಯಗಳು ಕಾಡಿದವು.

ಕೊನೆಗೆ ದೇವರನ್ನು ನಂಬಿ ನಾಲ್ಕನೆಯ ಬಸಿರನ್ನು ಹೊತ್ತಳು. ಏಳನೆಯ ತಿಂಗಳಿನಲ್ಲೇ ಕುರುಹು ತೋರಿದ್ದ ದೇಹ ಎಂಟನೆಯ ತಿಂಗಳಿಗೆ ಕುಸಿಯಿತು. ಶಿಥಿಲಗೊಂಡಿದ್ದ ಚೀಲದಿಂದ ಶಿಶು ಹೊರಬಂದು, ತಾಯಿಯ ಜೀವವನ್ನೂ ತೆಗೆದುಕೊಂಡು ತಾನೂ ಸತ್ತಿತ್ತು. ಅದು ಗಂಡುಶಿಶು! ಅಲ್ಲಿಂದ ವರ್ಷ ತೀರುವದರೊಳಗೆ ಅತ್ತೆ ತನ್ನ ಮಗನಿಗೆ ಎರಡನೇ ಮದುವೆ ಮಾಡಿಬಿಟ್ಟಳು.

ಈ ಸಾವನ್ನು ಏನೆನ್ನಬೇಕು? ಇಂಡಿಯನ್ ಪೀನಲ್ ಕೋಡ್ 302ರ ಪ್ರಕಾರ ಒಂದು ಕೊಲೆಯೆಂದರೆ, ಕೊಲೆಗಾರನಿಗೆ ಕೊಲೆಮಾಡುವ ಮಾನಸಿಕ ಉದ್ದೇಶವೂ ಇರಬೇಕು ಮತ್ತು ಆತನ ಕೈಯಿಂದಲೇ ಕೊಲೆಯ ಕ್ರಿಯೆಯೂ ನಡೆದಿರಬೇಕು. ಇದು ಸಂಪೂರ್ಣ ಕೊಲೆ! ಇಂತಹ ಕೊಲೆಯೆಂಬ ಕ್ರಿಯೆ ನಡೆಸಿದ ಆತ/ಆಕೆ ಕೊಲೆಗಾರ. ನೋಡಿ, ಈ ಪ್ರಕರಣದಲ್ಲಿ ಈ ಹೆಂಗಸನ್ನು ಅತ್ತೆ, ಗಂಡ, ಸಮಾಜ ಈ ಮೂವರೂ ಕೈಯಿಂದ ಕೊಲೆ ಮಾಡಿಲ್ಲ. ಹಾಗೂ ಮನಸ್ಸಿನಿಂದ ಕೊಲೆ ಮಾಡುವ ಉದ್ದೇಶ ಹೊಂದಿರಲಿಲ್ಲ. ಆದುದರಿಂದ ಕಾನೂನಿನನ್ವಯ ಇದು ಕೊಲೆಯೂ ಅಲ್ಲ, ಇವರಾರೂ ಕೊಲೆಗಾರರೂ ಅಲ್ಲ. ಒಂಬತ್ತು ತಿಂಗಳಿಗೆ ಬಸಿರು ಬಿದ್ದಿದ್ದರಿಂದ ಇದು

ಬಲವಂತದ ಅಬಾರ್ಷನ್ ಅಲ್ಲ. ಆದುದರಿಂದ IPC 312 – 316ಅಡಿ ಇದು ಬಲವಂತ ಗರ್ಭಪಾತ ಅಪರಾಧಕ್ಕೆ ಪರಿಗಣಿತವಾಗುವುದಿಲ್ಲ.

ಆದರೆ ಕಾನೂನನ್ನು ಬದಿಗಿಟ್ಟು ನೋಡಿದರೆ ಇದು ಕೊಲೆ, ಕೊಲೆ! ಗಂಡುಮಗುವೇ ಪಿತೃಗಳ ಮೋಕ್ಷದಾತ, ಗಂಡುಮಗುವೇ ಕುಲದ ವಾರಸುದಾರ, ಗಂಡುಮಗನ ಮನೆ ಮಾತ್ರ ತಾಯಿ–ತಂದೆಯರ ಇಳಿಗಾಲದ ತಾಣವೆಂಬ ಭಾರತೀಯ ಧರ್ಮಶಾಸ್ತ್ರದ ಅನ್ವಯ ಪ್ರಚಲಿತಗೊಂಡ ಭಾವನೆಗಳು, ನಂಬುಗೆಗಳು ಮತ್ತು ಇವುಗಳನ್ನು ಬಹುಭದ್ರವಾಗಿ ತಲೆಮಾರಿಂದ ತಲೆಮಾರಿಗೆ ಸಾಗಿಸುತ್ತಿರುವ ಕುಟುಂಬ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆಯೇ ಇಲ್ಲಿ ನೇರವಾದ ಕೊಲೆಗಾರ. "ಗಂಡ್ಹೆಚ್ಚು" ಎಂಬ ಮೇಲರಿಮೆಯನ್ನು ಪೋಷಿಸಿರುವ ಈ ರೀತಿಯ ಸಾಮಾಜಿಕ ವ್ಯವಸ್ಥೆ, ಭಾರತವೊಂದೇ ಅಲ್ಲ ಏಷಿಯಾಖಂಡದ ಎಲ್ಲಾ ರಾಷ್ಟ್ರಗಳಲ್ಲಿ ಈಗಲೂ ಇದೆ.

ಜಾಗತೀಕರಣದ ದೊಡ್ಡ ಬದಲಾವಣೆಯ ಗಾಳಿ ಬೀಸಿಯೂ, ಇದು ಸಂಪೂರ್ಣವಾಗಿ ನಿರ್ನಾಮಗೊಂಡಿಲ್ಲ. ಶಿಕ್ಷಣವೊಂದೇ ಇದಕ್ಕೆ ಪರಿಹಾರವೆಂದುಕೊಂಡಿದ್ದೂ ಈಗ ಸುಳ್ಳೇನೋ ಅನ್ನಿಸುತ್ತಿದೆ. ಈ ಪ್ರಕರಣದಲ್ಲಿ ಈ ಮೃತ ಬಸುರಿಯ ಗಂಡ ಸ್ನಾತಕೋತ್ತರ ಪದವೀಧರ. ಹಾಗಾದರೆ ಇದಕ್ಕೆ ಏನು ಪರಿಹಾರ? ಒಂದು ಗಂಡುಮಗುವೆಂಬುದು ಒಬ್ಬ ತಾಯಿಯ ಜೀವಕ್ಕಿಂತ ಹೆಚ್ಚಿನದೆ?

ಈ ಎರಡೂ ಪ್ರಶ್ನೆಗಳು ನನ್ನವಲ್ಲ. ನನ್ನ ಮಗ ನನ್ನನ್ನು ಕೇಳಿದ್ದು. ಇದೇ ವಿಷಯವಾಗಿ ಅವನು ಪ್ರಬಂಧ ಮಂಡಿಸಿದ್ದಾನೆ. ಇಷ್ಟಾದರೂ 50 ವರ್ಷಗಳ ಹಿಂದಿದ್ದ ದಾರುಣತೆ ಈಗ 60 ಭಾಗ ಕಡಿಮೆಯಾಗಿದೆ ಎನ್ನುವ ಸಮಾಧಾನವಿದೆ. ಇದಕ್ಕೆ ಸರಕಾರ ಸತತವಾಗಿ ಮಾಡಿದ ಪ್ರಚಾರ, ಹೆಣ್ಣುಮಕ್ಕಳಿಗೆ ದೊರೆತ ಶಿಕ್ಷಣ, ನಗರಗಳಲ್ಲಿ ಗಂಡುಸಂತಾನದ ಬಗೆಗಿನ ಮೇಲರಿಮೆ ಭ್ರಮನಿರಸನಗೊಂಡು ಇಳಿಕೆ ಕಂಡಿದ್ದು, ಹೆಣ್ಣುಮಕ್ಕಳು ಉದ್ಯೋಗಸ್ಥರಾಗಿ, ಕುಟುಂಬಕ್ಕೆ "ಕಣ್ಣಿಗೆ ಕಾಣುವಂತಹ" ಆದಾಯವನ್ನು ತಂದುಕೊಡಲು ಸಮರ್ಥರಾದದ್ದು, ಮುಖ್ಯವಾಗಿ ಸ್ತ್ರೀವಾದದ ಹೋರಾಟ, ಇವೆಲ್ಲವೂ ಕಾರಣವಾಯಿತು.

**ಈ ಪ್ರಕರಣಕ್ಕೆ ನೇರವಾಗಿ ಅನ್ವಯಿಸಿ ಹೇಳಬೇಕಾದದ್ದು ಇಷ್ಟು;**

1. ಗಂಡುಸಂತಾನದ ಮೋಹ ಸಂಪೂರ್ಣವಾಗಿ ನಿರ್ನಾಮಗೊಂಡಿಲ್ಲವಾದ್ದರಿಂದ, ಈ ದಿಸೆಯಲ್ಲಿ ನೇರವಾಗಿ ಸರ್ಕಾರ ಇನ್ನೂ ಹೆಚ್ಚಿನ ಬಿಗಿ ಕಾನೂನನ್ನು ರಚಿಸಬೇಕು. ಈ ರೀತಿ ಗಂಡು ಸಂತಾನದ ಅಪೇಕ್ಷೆಗಾಗಿ ದುರ್ಬಲವಾಗಿರುವ ಹೆಂಡತಿ ಯಾ ಸೊಸೆ ಯಾ ಮಗಳನ್ನು ಇನ್ನೊಂದು ಬಸಿರು ಹೊರುವಂತೆ ಒತ್ತಾಯ ಮಾಡುವ ಪ್ರಕರಣಗಳಲ್ಲಿ, ಸಾವು ಸಂಭವಿಸಲೀ ಅಥವಾ ಸ್ತ್ರೀಯ ದೇಹ ಮತ್ತು ಮನಸ್ಸಿನ ಮೇಲೆ ತೀವ್ರ ಆಘಾತವಾಗಲೀ ಆದಾಗ ಅದಕ್ಕೆ ಮರಣೋತ್ತರ/ವೈದ್ಯಕೀಯ ಪರೀಕ್ಷೆಗಳ ಪ್ರಮಾಣಪತ್ರದ ಸಾಕ್ಷಿಯೊಂದೇ ಅಲ್ಲ, ಆಕೆಯ ಸ್ವತಃ ಹೇಳಿಕೆಯನ್ನು ಮತ್ತು ಆಕೆಯ ಆತ್ಮೀಯರು ನೀಡುವ ವಿವರಣೆಗಳನ್ನು ಸಾಕ್ಷಿಯೆಂದು ಪರಿಗಣಿಸಿ, ಮಹಿಳಾ ನ್ಯಾಯಾಧೀಶ ಮತ್ತು ಮಹಿಳಾ ವಕೀಲರಿಂದ ಕೇಸು ನಡೆಯಿಸಿ, ತಪ್ಪಿತಸ್ಥರನ್ನು ಅಂದರೆ ಬಲವಂತದ ಬಸಿರಿಗೆ ಕಾರಣನಾದ ಗಂಡು, ಪ್ರೇರಕರಾದ ಕುಟುಂಬ ವರ್ಗದವರನ್ನು ಅಪರಾಧಿಗಳೆಂದೇ ಪರಿಗಣಿಸಿ ಅಪರಾಧದ, ಕ್ರಿಯೆಯ ಪ್ರಮಾಣಕ್ಕೆ ಅನುಗುಣವಾದ ಶಿಕ್ಷೆಯನ್ನು ಕ್ರಿಮಿನಲ್ ಕಾಯ್ದೆಯಡಿಯಲ್ಲಿಯೇ ನೀಡುವಂತಹ ನಿಯಮವನ್ನು ಕಾನೂನು ಶಾಸ್ತ್ರಕ್ಕೆ ಹೊಸದಾಗಿ ಸೇರಿಸಿ ತಿದ್ದುಪಡಿಯನ್ನು ಅಂಗೀಕರಿಸಿ ಮಾನ್ಯಮಾಡಬೇಕು. ಈ



ದಂಡಂ ದಶಗುಣದ ಹೊರತಾಗಿ ಜನ ಬೇರೆಯ ಸಾಮ, ದಾನ, ವಿಧಾನಗಳಿಗೆ ಬೇಗ ಬಗ್ಗುವುದಿಲ್ಲ. ಅಲ್ಲಿಯತನಕ, ಕಾನೂನು ಪ್ರಕಾರ ಯಾವ ಅಪರಾಧವೆಂದೂ ಪರಿಗಣಿಸದ ಈ ಕ್ರೌರ್ಯ ತಹಬಂದಿಗೆ ಬರುವುದಿಲ್ಲ. ಹೇಗೆ ನೋಡಿದರೂ ಇದನ್ನೊಂದು ಕಾನೂನುಬದ್ಧ ಕೊಲೆಯೆಂದು ಈಗಿರುವ ನಿಯಮದಡಿ ಸಾಬೀತು ಪಡಿಸಲು ಸಾಧ್ಯವೇ ಆಗುವುದಿಲ್ಲ. ಸ್ತ್ರೀಭ್ರೂಣಹತ್ಯೆಗೆ ತಂದ ಕಾನೂನುಗಳಂತೆಯೇ ಗಂಡುಸಂತಾನಕ್ಕಾಗಿಯೇ ಸ್ತ್ರೀಯನ್ನು ಅಪಾಯದ ಬಸಿರಿಗೆ ದೂಡುವುದರ ಬಗ್ಗೆಯೂ ಕಾನೂನನ್ನು ತರಬೇಕಾದದ್ದು ತುರ್ತು ಅಗತ್ಯವಾಗಿದೆ.

2. ಹೆಂಗಸರು ಎಳೆವಯಸ್ಸಿನಲ್ಲಿಯೇ ಈ ಬಗ್ಗೆ ತಿಳಿವಳಿಕೆ ಪಡೆಯಲು, ಪಠ್ಯಪುಸ್ತಕಗಳಲ್ಲಿ ಗಂಡು ಸಂತಾನದ ಮೇಲಿನ ಅನಗತ್ಯ ಮೋಹದ ಬಗ್ಗೆ, ಅದರಿಂದಾಗುವ ಕೆಟ್ಟ ಪರಿಣಾಮಗಳ ಬಗ್ಗೆ ತಿಳಿಸುವ ಒಂದು ಪಾಠವನ್ನಾದರೂ ಸೇರಿಸಿದರೆ ಸೂಕ್ತ. ಹೆಂಗಸಿಗೆ ಇದರ ತಿಳಿವಳಿಕೆ ಬರುವುದು ಗಂಡಸರಿಗಿಂತಲೂ ಹೆಚ್ಚು ಮುಖ್ಯವಾದದ್ದು.
3. ಬಹುಶಃ ಈ ಕಾನೂನು ಇದೆಯೆಂದು ನಾನು ತಿಳಿದಿದ್ದೇನೆ. ಅದೆಂದರೆ ಹೆಣ್ಣುಮಕ್ಕಳನ್ನು ಮಾತ್ರ ಪಡೆದಿರುವ ಕುಟುಂಬಕ್ಕೆ, ಪಡಿತರ, ಕೂಲಿ, ಉದ್ಯೋಗ, ಸಂಬಳ, ವಿದ್ಯೆ, ವಿದ್ಯುತ್ ಬಿಲ್ಲಿನಂತಹ ಕಡೆಗಳಲ್ಲೂ ರಿಯಾಯಿತಿ ನೀಡಿ ಉತ್ತೇಜಿಸುವುದು.

ಇನ್ನೊಂದು ಇಂತಹುದೇ ಗಂಡುಸಂತಾನದ ಮೋಹದಿಂದಾದ ದುಷ್ಪರಿಣಾಮದ ವಿವರವನ್ನು ಮುಂದಿನ ಲೇಖನದಲ್ಲಿ ತಿಳಿಸುತ್ತೇನೆ. ❑

*"ನಮ್ಮ ಮಾನಸ ಬೆಳೆಯಬೇಕೆಂಬ ಆಶಯ ನನ್ನದು, ಏಕೆಂದರೆ ಇದು ಮಹಿಳೆಯರಿಂದ ಮಹಿಳೆಯರಿಗಾಗಿ ಇರುವ ವಿಶಿಷ್ಟ ಪತ್ರಿಕೆ."*

*– ಮಾಲತಿ ಪಟ್ಟಣಶೆಟ್ಟಿ*

# ಬೊಂಬೆ

ಮಲೆಯಾಳ : ಸಾವಿತ್ರಿ ರಾಜೀವನ್

ನಾನೊಂದು
ನಿಧಾನ ಸವೆದು ಹೋಗುತ್ತಿರುವ
ಅಡುಗೆ ಮನೆಯ ಜೀರ್ಣವಾದ ಸಾಮಾನು
ನಿಧಾನವಾಗಿ ತಿರುಗಿಸಲ್ಪಟ್ಟ ಯಂತ್ರದಂತೆ
ಇದು ಉಸಿರಾಡುತ್ತಾ ನಡೆದಾಡುತ್ತೆ
ನಡೆದಾಡುವುದರಿಂದ ಮಲಗುತ್ತೆ
ಹಾಗೂ ಅನ್ನದೊಂದಿಗೇ ಒಂದೆರಡು ಮಾತನ್ನು ಬಡಿಸುತ್ತೆ.

ನನ್ನ ಮಕ್ಕಳಿಗೆ ನಾನೊಂದು ನಮೂನೆಯ ಆಟಿಕೆ
ತರತರಹದ ಸಿಹಿತಿಂಡಿ ಮಾಡಿಡುವ
ಒಂದೊಂದು ಸಲ ಬೊಗಳುವ
ಕಚ್ಚುವುದನ್ನೇ ಮರೆತ ನಾಯಿ
ಕಲಿಸಿದ್ದೇನೆ ನಾನು ಅವರಿಗೆ
ಇರುವೆ ಹಾಗೂ ಜೇನು ಹುಳದ ಕತೆಯನ್ನು
ಹಿರಿಯರಿಗೆ ಅಜ್ಞಾಪಿಸುವ ನೀತಿಯನ್ನು
ಕಲಿತಿದ್ದಾರೆ ಅವರದೇ ರೀತಿಯಲ್ಲಿ

ಹೀಗೆ,
ಅವರು ಅಮ್ಮನ ಮಾತನ್ನೇ ಮೀರುತ್ತಾರೆ
ಬದಲಾಗಿ
ತಮ್ಮ ಮುದ್ದಿನ ಬೊಂಬೆಗೇ ಆರ್ಡರ್ ಮಾಡುತ್ತಾರೆ
ಕೂತು ಹಾಡಲೆಂದೋ, ಗೋಳಾಡಲೆಂದೋ,
ಗುಡಿಯ ಕಲ್ಲು ಹಾಸಿನ ಮೇಲೆ ಕೂರುವಂತೆ
ಜಿಗಿದಾಡುತ್ತಾರೆ ಈ ನನ್ನ ಮೈಯೆಂಬ ಹೆಂಚೆಯ ಮೇಲೆ

ಪ್ರದರ್ಶನಕ್ಕೆಂದೇ ಹೊರಬಂದಿರುವ
ಅಡುಗೆಯ ಆಟಿಕೆ ನಾನು
ದಿನನಿತ್ಯ ನನ್ನ ತಲೆ ಮೇಲೆ
ಹತ್ತಕ್ಕೂ ಹೆಚ್ಚು ಆಜ್ಞೆಗಳು
ಇದನಿನ್ನೂ ಆ ಗಾಸ್ಪೆಲ್ಲರ್ ಗುರುತಿಸಬೇಕಿದೆ



ಪಕ್ಕದ ಮನೆಯ ಗಂಡಸರ ನೋಟದಲ್ಲಿ
ಹೆಂಗಸರ ಮುಗಳ್ನಗುವಿನಲ್ಲಿ
ಬೆಳಗಿನ ದಿನಪತ್ರಿಕೆಗಳಲ್ಲಿ
ಸುತ್ತಮುತ್ತಲಿರುವ ಜಾಹಿರಾತುಗಳಲ್ಲಿ
ಮುದ್ದು ಮಕ್ಕಳ ತೊದಲು ತುಟಿಯಲ್ಲೂ
ನಾನು ಓದುತ್ತೇನೆ
ಇದೇ ಆಜ್ಞೆಯ ಮಾತುಗಳನ್ನು

ಮೃಗಾಲಯದ ಕಂಬಿಗಳ ಹಿಂದೆ
ಕ್ರೂರಮೃಗಕ್ಕೆ ಆಜ್ಞಾಪಿಸುವಂತೆ
ನನಗೆ ಆಜ್ಞಾಪಿಸುತ್ತಾರೆ
ನನ್ನ ಒಂದೊಂದೂ ಪ್ರತಿರೋಧವೂ
ಉಯ್ಯಾಲೆಯಲ್ಲಿ ತೂಗುವ
ಪ್ರಾಣಿ, ಪಕ್ಷಿಗಳಂತೆ
ಅವರಿಗೆ ಖುಷಿ ಕೊಡುತ್ತದೆ.

ದೇವತೆಯಾಗುತ್ತೇನೆ ಕೆಲವು ಬಾರಿ
ಹಣೆಯಲ್ಲಿ ಗಂಧ, ತುಳಸಿಯ ಎಲೆಗಳು
ನನ್ನ ಮುಡಿಯಲ್ಲಿ
ಕೆಲವು ಬಾರಿ ಕೃಷ್ಣನ ಪ್ರಿಯತಮೆಯಾಗಿ,
ಅಥವಾ ದೇವನ ಮಗನ ತಾಯಿಯಾಗುತ್ತೇನೆ.

ತಂಗಾಳಿಗೆ ತೊನೆವ ಶ್ವೇತ ಕಮಲವಾಗುತ್ತೇನೆ
ಕಾವ್ಯದಲ್ಲಿ, ಸ್ತೋತ್ರಗೀತೆಗಳಲ್ಲಿ
ರಕ್ತಸಿಕ್ತ ರಕ್ಕಸನ ರುಂಡ ಹಿಡಿದ
ರುದ್ರ ಕಾಳಿಯಾಗುತ್ತೇನೆ.
ಆದರೂ ಸತ್ಯ ಗೊತ್ತಿದೆ ನನಗೆ
ನಾನೊಂದು ಅಡುಗೆ ಮನೆಯ ಸವೆದ ವಸ್ತು
ಮೂರ್ತಿಯಾಗಿ, ದೇವಸ್ಥಾನವೇ ಅಡುಗೆಮನೆಯಾಗಿ
ರೂಪುಗೊಂಡಿರುವೆನೇ ವಿನಃ ಮತ್ತೇನೂ ಅಲ್ಲ.

ಅನು : ಡಾ॥ ಎಚ್.ಎಲ್. ಪುಷ್ಪ

# ಭಾಗ್ಯಲಕ್ಷ್ಮಿ

## ವನಿತೆಯರ ಪಾಲಿಗೆ ವರದಾನ

### ಯೋಜನೆಯ ಮುಖ್ಯಾಂಶಗಳು

- *2006–07ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೂ ರೂ. 10,850/– ಠೇವಣಿ.*
- *2007–08ನೇ ಸಾಲಿನಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೂ ರೂ.20,000/–ಠೇವಣಿ. 2008–09ನೇ ಸಾಲಿಗೆ ಇದನ್ನು ಇಮ್ಮಡಿಗೊಳಿಸಲಾಗಿದೆ.*
- *31ನೇ ಮಾರ್ಚ್ 2006ರ ನಂತರ ಬಿಪಿಎಲ್ ಕುಟುಂಬದಲ್ಲಿ ಜನಿಸಿದ ಎರಡು ಹೆಣ್ಣುಮಕ್ಕಳು ಈ ಯೋಜನೆಗೆ ಅರ್ಹರು. ಆ ಕುಟುಂಬ 3ಕ್ಕಿಂತ ಹೆಚ್ಚು ಮಕ್ಕಳನ್ನು ಹೊಂದಿರಬಾರದು.*

### ಇತರೆ ಪ್ರಯೋಜನಗಳು

- *ಒಂದನೇ ತರಗತಿಯಿಂದ ಹತ್ತನೆಯ ತರಗತಿಯವರೆಗೆ, ರೂ.300/–ರಿಂದ ರೂ. 1000/–ವರೆಗಿನ ವಾರ್ಷಿಕ ವಿದ್ಯಾರ್ಥಿವೇತನ*
- *18 ವರ್ಷ ವಯಸ್ಸಿನವರೆಗೂ ರೂ. 25,000/–ದಷ್ಟು ಆರೋಗ್ಯವಿಮೆ.*
- *ದುಡಿಯುತ್ತಿರುವ ತಂದೆ, ತಾಯಿ ಅಥವಾ ಪೋಷಕರ ಸಾವು ಸಂಭವಿಸಿದಲ್ಲಿ ರೂ. 1 (ಒಂದು) ಲಕ್ಷದವರೆಗೆ ಕುಟುಂಬ ವಿಮೆ.*

### ಸ್ತ್ರೀ ಸಬಲೀಕರಣಕ್ಕೆ ವಿನೂತನ ಕ್ರಮ

*ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಕ್ಕೆ ಹೆಚ್ಚಿನ ಮನ್ನಣೆ ದೊರಕಿಸಿಕೊಡುವ ಸದುದ್ದೇಶದಿಂದ ಕರ್ನಾಟಕ ಸರ್ಕಾರವು ಕೈಗೊಂಡಿರುವ ಮಹತ್ವದ ಯೋಜನೆ–ಭಾಗ್ಯಲಕ್ಷ್ಮಿ. ಬಡತನದ ರೇಖೆಗಿಂತ ಕೆಳಗಿನ ಕುಟುಂಬದಲ್ಲಿ 31ನೇ ಮಾರ್ಚ್ 2006ರ ನಂತರ ಜನಿಸಿದ ಇಬ್ಬರು ಹೆಣ್ಣುಮಕ್ಕಳಿಗೆ, ಅವರು 18 ವರ್ಷ ವಯಸ್ಸು ತಲುಪಿದಾಗ ರೂ. 1,00,000/–ವನ್ನು ನೀಡುವುದು ಈ ಯೋಜನೆಯ ಸಾರಾಂಶ.*


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದ ಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆ ಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆ ಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸ ಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018